(6)




# ಅಚಲ


ಸಂಪುಟ 12 | ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ | ಜುಲೈ-ಸೆಪ್ಟೆಂಬರ್ 1997

ಸಂಚಿಕೆ 3-4 | ದ್ವೈಮಾಸಿಕ | ಬೆಂಗಳೂರು





## ಒಳಪುಟಗಳಲ್ಲಿ




ಚಂದಾ ಮತ್ತು ಲೇಖನಗಳನ್ನು ಕಳುಹಿಸುವ ವಿಳಾಸ

ಸಂಪಾದಕರು

ಅಚಲ

ಬಿ-30, ರಿಸರ್ವ್ ಬ್ಯಾಂಕ್ ಸ್ಟಾಫ್ ಕ್ವಾರ್ಟರ್ಸ್

1ನೇ ಮುಖ್ಯರಸ್ತೆ, 9ನೇ ಕ್ರಾಸ್

ವಿಜಯನಗರ ಎರಡನೇ ಹಂತ,

ಬೆಂಗಳೂರು - 40

ಬೆಲೆ

ಬಿಡಿ ಪ್ರತಿ - 4 ರೂ.

ವಾರ್ಷಿಕ ಚಂದಾ - 25 ರೂ.

ಆಜೀವ ಚಂದಾ - 200 ರೂ.

(ಸಂಸ್ಥೆಗಳಿಗೆ) - 250 ರೂ.

ಸಂಪಾದಕ ಮಂಡಲಿ
ಎನ್. ಗಾಯತ್ರಿ
ನೇಮಿಚಂದ್ರ, ದೇವಿ
ಡಾ|| ಬಿ.ಎಸ್. ಸುಮಿತ್ರಾಬಾಯಿ
ಶಾಂತಾ ನಾಗರಾಜ್
ಎಚ್.ಎನ್. ಗೀತಾ
ಪ್ರಕಾಶಕರು
ಜಾಗೃತಿ ಮಹಿಳಾ
ಅಧ್ಯಯನ ಕೇಂದ್ರ
ಬೆಂಗಳೂರು

"ಶಾಲಾ ತೋಟ" ಮಕ್ಕಳ ಮಾಸಪತ್ರಿಕೆಯ ಸಂಪಾದಕಿ ಶ್ರೀಮತಿ ಎಚ್.ಎನ್. ಗೀತಾ ಈಗ ಅಚಲ ಸಂಪಾದಕ ಬಳಗಕ್ಕೆ ಸೇರಿದ್ದಾರೆಂದು ತಿಳಿಸಲು ಹರ್ಷಿಸುತ್ತೇವೆ.

-ಸಂ.

ವಿಮರ್ಶೆಗಾಗಿ ಪುಸ್ತಕಗಳನ್ನು ಕಳುಹಿಸುವವರು ದಯವಿಟ್ಟು ಎರಡು ಪ್ರತಿಗಳನ್ನು ಕಳುಹಿಸಬೇಕು

ಚಂದಾ ಹಣವನ್ನು ಚೆಕ್‌ನಲ್ಲಿ ಕಳುಹಿಸುವವರು ರೂ. 10/= ಬ್ಯಾಂಕ್ ಕಮಿಷನ್ ಸೇರಿಸಿ ಕಳುಹಿಸಬೇಕು

ಎಂ.ಓ. ಫಾರ್ಮಿನ ಕೊನೆಯ ಭಾಗದಲ್ಲಿ ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ನಮೂದಿಸ ಬೇಕು

ಬದಲಾದ ವಿಳಾಸಗಳನ್ನು ದಯವಿಟ್ಟು ಬರೆದು ತಿಳಿಸಿ.

## 'ದುಡಿಮೆಯ ಕ್ಷೇತ್ರದಲ್ಲಿ ಲೈಂಗಿಕ ಹಿಂಸೆ'

ದುಡಿಮೆಯ ಕ್ಷೇತ್ರದಲ್ಲಿ ಹೆಣ್ಣು ಎದುರಿಸಬೇಕಾಗಿಬರುವ ಲೈಂಗಿಕ ಹಿಂಸೆಗಳನ್ನು ಕುರಿತು ಸುಪ್ರೀಂಕೋರ್ಟು ಇತ್ತೀಚೆಗೆ ನೀಡಿರುವ ಆಜ್ಞೆ ಸ್ವಾಗತಾರ್ಹವೆನಿಸಿದ್ದು, ಹೆಣ್ಣಾಗಿರುವುದರಿಂದ ಹೆಣ್ಣು ಎದುರಿಸುತ್ತಿರುವ ಸಮಸ್ಯೆಗಳ ಬಗ್ಗೆ ಗಂಭೀರ ನಿಲುವೊಂದು ರೂಪುಗೊಳ್ಳುವ ಸಾಧ್ಯತೆಯಿದೆ. ಸುಪ್ರೀಂಕೋರ್ಟಿನ ಆಜ್ಞೆಯಲ್ಲಿ ಈ ಕೆಲವು ನಿರ್ದೇಶನಗಳಿವೆ :

1) ಲೈಂಗಿಕ ಹಿಂಸೆಯ ನಿಷೇಧ ಮತ್ತು ಲೈಂಗಿಕ ಹಿಂಸೆಯ ನಿರ್ವಚನ (ಟೀಕೆ, ಪ್ರತಿಕ್ರಿಯೆ, ಮೂದಲಿಕೆ, ದೈಹಿಕವಾಗಿ ಆಹ್ವಾನಿಸುವುದು) -ಇವುಗಳನ್ನು ಕುರಿತಂತೆ ಗಮನಸೆಳೆಯುವ ಸುತ್ತೋಲೆಗಳನ್ನು ದುಡಿಮೆಯ ಸ್ಥಳದಲ್ಲಿ ಪ್ರದರ್ಶಿಸುವುದು.

2) ಈ ಸಂಬಂಧವಾಗಿ ಬರುವ ದೂರುಗಳನ್ನು ಪರಿಶೀಲಿಸಲು ಪ್ರತ್ಯೇಕ ಸಮಿತಿಯೊಂದನ್ನು ರೂಪಿಸಿ ಅದರಲ್ಲಿ ಶೇಕಡ 50ರ ಭಾಗ ಮಹಿಳೆಯರನ್ನು ಒಳಗೊಂಡಿದ್ದು ಮತ್ತು ಒಬ್ಬ ಎನ್.ಜಿ.ಓ. ಪ್ರತಿನಿಧಿಯೂ ಇರುವಂತಿರಬೇಕು ಹಾಗೂ ಇದು ಕಾಲಬದ್ಧವಾದ ಕ್ರಿಯೆಗೆ ಒಳಪಡಬೇಕು.

3) ಕೈಗಾರಿಕಾ ವಿವಾದಗಳ ಮಸೂದೆಯಲ್ಲಿ ಈ ಲೈಂಗಿಕ ಹಿಂಸೆಯ ನಿಷೇಧವನ್ನು ಕುರಿತ ನೀತಿ ನಿಯಮಾವಳಿಗಳೂ ಅಳವಡಬೇಕು.

4) ನಿರ್ದಿಷ್ಟ ಶಿಕ್ಷಾರ್ಹ ಕೃತ್ಯವು ನಡೆದಿದ್ದಲ್ಲಿ ಕ್ರಿಮಿನಲ್ ಪ್ರೊಸೀಡಿಂಗ್ಸನ್ನು ಜಾರಿಗೊಳ್ಳುವಂತೆ ನೋಡಿಕೊಳ್ಳಬೇಕು.

**ಸುಪ್ರೀಂಕೋರ್ಟಿನ ಈ ಆಜ್ಞೆಯ ಹಿಂದಿನ ಆಶಯವನ್ನು ಎಲ್ಲ ಸ್ತ್ರೀಪರ ಹೋರಾಟಗಾರರೂ, ಚಿಂತಕರು ಸ್ವಾಗತಿಸುವರಾದರೂ ಈ ಶಾಸನದ ಸಫಲತೆ ಮತ್ತು ಸಾರ್ಥಕತೆಯು ಅದರ ಅನುಷ್ಠಾನದ ಪ್ರಾಮಾಣಿಕತೆ ಮತ್ತು ಕಾರ್ಯಬದ್ಧತೆಯ ಮೇಲೆಯೇ ನಿಂತಿದೆ. ಯಾವುದೇ ಶಾಸನವು ದುಷ್ಟರ ಕೈಯಲ್ಲಿ ದುರುಪಯೋಗವಾಗಬಲ್ಲಂತೆ ಇಲ್ಲೂ ಆಗಬಹುದಾದ ಸಾಧ್ಯತೆಯಿದೆ.**

**ಈ ನಿಟ್ಟಿನಲ್ಲಿ ಮಹಿಳೆಯರು ಎದುರಿಸುತ್ತಿರುವ ಸಮಸ್ಯೆಗಳನ್ನು ಅನುಭವಗಳನ್ನು, ಶಾಸನದ ಸಫಲತೆ/ವಿಫಲತೆಗಳನ್ನು ಕುರಿತ ನಿಮ್ಮ ಪ್ರತಿಕ್ರಿಯೆಗಳನ್ನು ಅಚಲದೊಂದಿಗೆ ಹಂಚಿಕೊಳ್ಳಲು ಆಹ್ವಾನಿಸುತ್ತಿದ್ದೇವೆ.**

# ಸ್ವಾತಂತ್ರ್ಯ ಚಳುವಳಿಯಲ್ಲಿ ಭಾರತದ ಮಹಿಳೆ

ಚರಿತ್ರೆಯಲ್ಲಿ ದಾಖಲಾಗಿರುವ ಹೆಣ್ಣಿನ ಜೀವನ ಮತ್ತು ಬದುಕನ್ನು ಹಾಗೂ ಅವಳು ನಿರ್ವಹಿಸಿದ, ಭಾಗವಹಿಸಿದ ಚಳುವಳಿಯನ್ನು ಸ್ತ್ರೀವಾದಿ ನೆಲೆಯಿಂದ ನೋಡುವ ಪ್ರಯತ್ನ ಇತ್ತೀಚಿನದು. ಭಾರತದ ಸಂದರ್ಭದಲ್ಲಿ ಹೆಣ್ಣು ತನ್ನ ಸಾಂಪ್ರದಾಯಿಕ ಪಾತ್ರದಾಚೆಗೆ ನಡೆದು, ಕುಟುಂಬದಿಂದ ಹೊರಬಂದು ಬೀದಿಗಿಳಿದ ಮಹತ್ವದ ಘಟನೆ ನಡೆದದ್ದೇ ಸ್ವಾತಂತ್ರ್ಯ ಚಳುವಳಿಯಲ್ಲಿ. ಅಡುಗೆ ಮನೆಯಲ್ಲಿ ಗಮಟುಹಿಡಿದು ಸುರುಟಿ ಹೋಗಿದ್ದ ಮಹಿಳೆಯ, ಅದರಲ್ಲೂ ಮಧ್ಯಮ ವರ್ಗದ ಮಹಿಳೆಯ ಚೇತನ ಬಿಡುಗಡೆಯ ಹಾಡಹಾಡಿದ್ದು ಈ ಸಂದರ್ಭದಲ್ಲೇ. ಹತ್ತೊಂಬತ್ತನೆಯ ಶತಮಾನದಿಂದೀಚೆಗೆ ಹೆಣ್ಣು ರಾಜಕೀಯವಾಗಿ ಆಸಕ್ತಿಯ ಕೇಂದ್ರವಾದಷ್ಟೇ ಸುಧಾರಣೆಯ ಹರಿಕಾರಳಾಗಿದ್ದಾಳೆ; ಬದಲಾವಣೆಯ ಪ್ರಮುಖ ಪಾತ್ರವಾಗಿದ್ದಾಳೆ.

ನಮ್ಮ ಗ್ರಹಿಕೆಗೆ ಸಿಕ್ಕುವ ಭಾರತೀಯ ಮಹಿಳೆ ಹೇಗೆ ಸಂಕೀರ್ಣ ಮತ್ತು ವೈವಿಧ್ಯಮಯವೋ, ಹಾಗೆಯೇ ಸ್ವಾತಂತ್ರ್ಯದ ಚಳುವಳಿಯಲ್ಲಿ ಅವಳ ಪಾತ್ರವೂ ಕೂಡ. ಸಮಾಜದ ವಿವಿಧ ನೆಲೆಗಳಿಂದ-ಶ್ರೀಮಂತವರ್ಗದಿಂದ ಹಿಡಿದು ಕೂಲಿಕಾರ ಹೆಣ್ಣುಮಕ್ಕಳವರೆಗೂ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ್ದಾರೆ. ಆದರೆ ಚರಿತ್ರೆಯ ಗತಿಯಲ್ಲಿ ಯಾರ ಸಾಧನೆ ಎಷ್ಟು, ಎನ್ನುವುದು ಇನ್ನೂ ಪರಿಶೀಲಿಸಬೇಕಾದ ವಿಷಯವೇ ಆಗಿದೆ.

ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಮಹಿಳೆ ಆಯ್ದುಕೊಂಡ ಹೋರಾಟದ ವಿಧಾನಗಳು ಹಲವಾರಿವೆ. ಆಯಾ ಪರಿಸರದ ಅಗತ್ಯಕ್ಕೆ ತಕ್ಕಂತೆ ಹೋರಾಟದ ವಿಧಾನಗಳನ್ನು ಬದಲಿಸಿಕೊಂಡ ಮಹಿಳೆಯರು ಕರನಿರಾಕರಣೆ, ಪಿಕೆಟಿಂಗ್, ವಿದೇಶೀ ವಸ್ತುಗಳ ತ್ಯಾಗ, ಸತ್ಯಾಗ್ರಹ, ಉಪವಾಸವ್ರತ, ಪಾನನಿರೋಧ ಪ್ರಭಾತಫೇರಿ - ಎಲ್ಲ ರೀತಿಯ ಕಾರ್ಯಕ್ರಮಗಳಲ್ಲೂ ತಮ್ಮ ಸಾಮರ್ಥ್ಯವನ್ನು ಮೆರೆದಿದ್ದಾರೆ. ಹೋರಾಟದ ಸ್ವರೂಪ ಮತ್ತು ತೀವ್ರತೆ ವ್ಯಕ್ತಿ, ವೈಶಿಷ್ಟ್ಯಗಳನ್ನಲ್ಲದೆ ಸಂದರ್ಭದ ಒತ್ತಡಗಳನ್ನೂ ಪ್ರತಿಬಿಂಬಿಸುತ್ತವೆ. ಗಂಡನ ಗೈರುಹಾಜರಿಯಲ್ಲಿ ಕಂಕುಳಲ್ಲಿ ಕೂಸಿರುವಾಗ ಧ್ವಜಾರೋಹಣ ಮಾಡಿ ಜೈಲು ಸೇರಿದ ಸುಬ್ಬಮ್ಮ ಜೋಯಿಸ್‌ರಿರಲಿ, ಗರ್ಭಿಣಿಯಾಗಿದ್ದರೂ ಬಿಜಾಪುರದಿಂದ ಬೆಂಗಳೂರಿಗೆ ಪೊಲೀಸರ ಕಣ್ಣುತಪ್ಪಿಸಲು ಕಾಲ್ನಡಿಗೆಯಲ್ಲಿ ನಡೆದುಬಂದ ಗೌರಮ್ಮ ವೆಂಕಟರಾಮಯ್ಯನವರ ಸಾಹಸವಾಗಲೀ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಮಹಿಳೆಯರ ಸಾಹಸಗಾಥೆಯನ್ನು ಹೇಳುತ್ತದೆ.

ಪುರುಷನೇತೃತ್ವದ ಸಾಮಾಜಿಕ ಚಳುವಳಿಗಳಲ್ಲಿ ಮಹಿಳೆಯರಿಗಿರುವ ಆದ್ಯತೆ ಮತ್ತು ಪ್ರಾಮುಖ್ಯತೆಯ ಬಗೆಗೆ ಸಂಶಯಗಳು ಹಲವಾರಿವೆ. ನಮ್ಮ ಮಹಿಳೆಯರ ಅನುಭವಗಳು ಮತ್ತು ಚಿಂತನೆಗಳು ನಿಷ್ಕಾಮವಾಗಿರುವ ಸಂದರ್ಭಗಳೇ ಸ್ವಾತಂತ್ರ್ಯ ಚಳುವಳಿಯಲ್ಲಿ ಹೆಚ್ಚಾಗಿದ್ದು ಯಾರೂ ಪುರುಷ ವಿರೋಧಿ ಧೋರಣೆಯನ್ನು ವ್ಯಕ್ತಪಡಿಸದಿರುವುದು ಗಮನಿಸಬೇಕಾದ ಅಂಶ.

ಗಾಂಧಿಯ ವ್ಯಕ್ತಿತ್ವ ಮತ್ತು ಚಿಂತನೆಯ ಬಗೆಗೆ ಆರಾಧನಾ ಮನೋಭಾವದಿಂದ ಮಾತನಾಡುವ ಮಹಾದೇವಿಯವರಿಗೂ ಇಡೀ ಚಳುವಳಿಯನ್ನು ಚಿಕಿತ್ಸಕ ದೃಷ್ಟಿಯಿಂದ ನೋಡಬಲ್ಲ ಗೌರಮ್ಮನವರಿಗೂ ಇರುವ ಸಮಾನ ಮನೋಭಾವವೆಂದರೆ ದೇಶಪ್ರೇಮವೊಂದೇ. ಈ ಸಂದರ್ಭದ ಮಹಿಳೆಯರು ವ್ಯಕ್ತಪಡಿಸುವ ವಿಚಾರಗಳ ವೈವಿಧ್ಯದಷ್ಟೇ ಅವರು ಭಾಗವಹಿಸಿರುವ ಕಾರ್ಯಕ್ರಮಗಳು ವೈವಿಧ್ಯಮಯವಾಗಿವೆ.

ಗಾಂಧಿ ಪ್ರತಿಪಾದಿಸಿದ ಸತ್ಯಾಗ್ರಹ ಮಾರ್ಗದಿಂದಷ್ಟೇ ಅಲ್ಲದೆ, ಶಸ್ತ್ರಾಸ್ತ್ರಗಳ ಮೂಲಕ ಬ್ರಿಟಿಷರ ವಿರುದ್ಧ ಸಮರ ಹೂಡಿದ, ವಿವಿಧ ಅಲೆಗಳಿಗೆ ಸೇರಿದ ಪಂಗಡಗಳು ಈ ಸಂದರ್ಭದಲ್ಲಿ ಕಾಣಿಸಿಕೊಂಡಿವೆ. ಚಿತ್ತಗಾಂಗ್ ಸಮರದಲ್ಲಿ ಭಾಗವಹಿಸಿದ ಪ್ರೀತಿಲತಾ, ಕಲ್ಪನಾದತ್ ಮುಂತಾದವರು, ಐ.ಎನ್.ಎ. ಸೈನ್ಯದಲ್ಲಿದ್ದ ಕ್ಯಾಪ್ಟನ್ ಲಕ್ಷ್ಮಿ ಸೆಹಗಾಲ್ ಮುಂತಾದವರೂ ಸ್ವಾತಂತ್ರ್ಯ ಹೋರಾಟದ ವಿವಿಧ ಧ್ವನಿಗಳಾಗಿದ್ದಾರೆ.

ಮಹಿಳೆಯರ ಸಂಘರ್ಷವನ್ನು ರಾಷ್ಟ್ರೀಯ ಸ್ವಾತಂತ್ರ್ಯದ ಆಂದೋಲನದೊಂದಿಗೆ ಸಮೀಕರಿಸಿದ ಗಾಂಧಿ ಮಹಿಳೆಯರಿಗೇ ಪ್ರತ್ಯೇಕವಾದ ಚಳುವಳಿಯನ್ನು ನಿರಾಕರಿಸಿದರು. ಆದರೂ ಮುಂದಿನ ಮಹಿಳಾ ಚಳುವಳಿಗೆ ಭದ್ರವಾದ ಬುನಾದಿಯನ್ನು ಸ್ವಾತಂತ್ರ್ಯ ಚಳುವಳಿ ಬಿತ್ತಿತೆಂಬುದರಲ್ಲಿ ಸಂಶಯವಿಲ್ಲ. ಈ ಸಂಚಿಕೆಯಲ್ಲಿ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ ಕೆಲವು ಗಣ್ಯ ವ್ಯಕ್ತಿಗಳನ್ನು ಸಂದರ್ಶಿಸಿ ಕೆಲವೊಂದು ಅಭಿಪ್ರಾಯಗಳನ್ನು ಸಂಗ್ರಹಿಸಿದ್ದೇವೆ. 'ಸ್ವಾತಂತ್ರ್ಯ-50'ರ ಈ ಸಂದರ್ಭ ಚರಿತ್ರೆಯನ್ನು ಪುನ: ವಿಮರ್ಶಿಸಿಕೊಳ್ಳುವ ಮಹತ್ವದ ಸಂದರ್ಭವೂ ಹೌದು, ಮಹಿಳಾ ಸ್ವಾತಂತ್ರ್ಯ ಮತ್ತು ಸಮಾನತೆಯ ಹುಡುಕಾಟದ ಇಂದಿನ ಅಗತ್ಯಕ್ಕೆ ಈ ಚರಿತ್ರೆಯ ಪಾಠಗಳು ಅಧ್ಯಯನದ ಮಾಹಿತಿಗಳಾಗಿವೆ.

-ಎನ್. ಗಾಯತ್ರಿ

# ಸ್ವರಾಜ್ಯ-ಸಮಾನತೆ : ಹೋರಾಟಗಾರರ ಪರಿಕಲ್ಪನೆ

*ಚರಿತ್ರೆಯಲ್ಲಿ ಭಾರತೀಯ ಮಹಿಳೆ ಚಳುವಳಿಯ ಭಾಗವಾದದ್ದು ಗಾಂಧೀಜಿಯವರ ಸ್ವಾತಂತ್ರ್ಯ ಸಂಗ್ರಾಮದಲ್ಲಿ, ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಮಹಿಳೆಯು ಆಯ್ದುಕೊಂಡ ಹೋರಾಟದ ವಿಧಾನಗಳು ಹಲವಾರು. ಕುಟುಂಬದ ಪರಿಸರ, ಪ್ರಭಾವಗಳಿಂದ ಚಳುವಳಿಗೆ ಬಂದವರಿದ್ದಾರೆ. ಇಲ್ಲವೇ, ಸ್ವಯಂಸ್ಫೂರ್ತಿಯಿಂದ ಚಳುವಳಿಗೆ ಬಂದು ಅಲ್ಲಿ ಹೋರಾಟದ ಸಂದರ್ಭದಲ್ಲಿ ತಮ್ಮ ಬಾಳ ಸಂಗಾತಿಗಳನ್ನು ಆಯ್ದುಕೊಂಡವರಿದ್ದಾರೆ. ಬದುಕು ಮತ್ತು ಹೋರಾಟ ಗಳೆರಡರಲ್ಲೂ ದೇಶಪ್ರೇಮ ಮತ್ತು ಸ್ವರಾಜ್ಯದ ಮಂತ್ರವನ್ನೇ ತುಂಬಿಕೊಂಡು ಹೋರಾಡಿದ ಈ ತಲೆಮಾರಿನವರ ಸ್ತ್ರೀ-ಪುರುಷ ಸಮಾನತೆಯ ಕಲ್ಪನೆಗಳು ಮತ್ತು ಗ್ರಹಿಕೆಗಳನ್ನು ನಮಗೆ ಲಭ್ಯವಾದ ಕೆಲವು ಸ್ವಾತಂತ್ರ್ಯ ಹೋರಾಟಗಾರರ ಅನುಭವದ ನೆಲೆಗಳಲ್ಲಿ ಗುರುತಿಸುವ 'ಅಚಲ'ದ ಒಂದು ಚಿಕ್ಕ ಪ್ರಯತ್ನ ಇದು.*



## ಮಹಾದೇವಿ ತಾಯಿ

ನಗರದ ಗಜಿಬಿಜಿಗುಟ್ಟುವ ವಾತಾವರಣದ ಮಡಿಲಲ್ಲೇ ಕಂಡುಬರುವ ಪ್ರಶಾಂತ ಆಶ್ರಮ - ವಲ್ಲಭನಿಕೇತನ ವಿನೋಬಾ ಆಶ್ರಮ. ಈ ಆಶ್ರಮದ ಕೇಂದ್ರ ಬಿಂದು ಮಹಾದೇವಿ ತಾಯಿ ತೊಂಭತ್ತ-ಮೂರು ವಯಸ್ಸಿನ ಈ ವೃದ್ಧೆಯನ್ನು ಯಾರೂ ಯಾವ ಸಂದರ್ಭ-ದಲ್ಲಾದರೂ ಭೆಟ್ಟಿಯಾಗಬಹುದು. ಅಜ್ಜಿಯ ಮನೆಗೆ ಹೋಗಿ ಬರುವಷ್ಟೇ ಸಲೀಸಾಗಿ ಮತ್ತು ಸಂತೋಷದಿಂದ ಹೋಗಿ ಬಂದ ಅನುಭವ ನನಗೆ. 'ಅಚಲ'ಕ್ಕಾಗಿ ಎರಡು ಮೂರು ಬಾರಿ ಅವರಲ್ಲಿಗೆ ಹೋಗಿ ಬಂದ ನನಗೆ ಅವರೊಡನೆ ಮಾತಾಡಿಬಂದ ವಿಚಾರಗಳ ಸಾರವನ್ನಷ್ಟೇ ಇಲ್ಲಿ ಮೆಲುಕು ಹಾಕುವೆ :

''ಆಗ 24, 25ರ ಇಸವಿಯಿರಬಹುದು. ನಾನು ಗಾಂಧೀಜಿ-ಯವರನ್ನು ನೋಡಿರಲಿಲ್ಲ. 'ದೇಶಕ್ಕಾಗಿ ದುಡಿಯುವ, ದೇಶಕ್ಕಾಗಿ ಮಡಿಯುವ' ಎನ್ನುವ ಗಾಂಧಿಯವರ ಮಾತಿನಿಂದ ಪ್ರಭಾವಿತ-ಳಾಗಿದ್ದೆ. ಹಳ್ಳಿಗಳಲ್ಲಿ ಶಹರುಗಳಲ್ಲಿದ್ದ ಜನರೆಲ್ಲಾ ಗಾಂಧಿ ಮಂತ್ರದಿಂದಲೇ ಪ್ರಭಾವಿತರಾಗಿದ್ದರು. ಆಗ ಪತ್ರಿಕೆಗಳ ಕಾಲವಲ್ಲಾ, ಕರಪತ್ರಗಳೇ ನಮಗೆ ಸುದ್ದಿ ಸಮಾಚಾರವನ್ನು ಕೊಡುತ್ತಿದ್ದವು.

ನನ್ನ ಸ್ವಾತಂತ್ರ್ಯ ಹೋರಾಟದ ಸ್ಮರಣೀಯ ದಿನಗಳನ್ನು ನೆನೆಸಿಕೊಳ್ಳುವುದೆಂದರೆ ಗಾಂಧಿಯವರ ಭೇಟಿಯೇ ಕಣ್ಣುಮುಂದೆ ಬರುತ್ತದೆ. ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ನಾನು ನಾಲ್ಕು ಬಾರಿ ಜೈಲಿಗೆ ಹೋಗಿರುವೆ. ಎರಡನೆಯ ಬಾರಿ ಹಿಂಡಲಿಗೆ ಜೈಲಿಗೆ ಹಾಕಿದ್ದಾಗ ಆದ ಅನುಭವ. ನಮ್ಮೊಡನೆ ಕ್ರಿಮಿನಲ್ ಕೈದಿಗಳನ್ನು ತುಂಬಿಸಿ ದೊಡ್ಡ ಹಾಲ್‌ನಲ್ಲಿ ಎಲ್ಲರೂ ಒಟ್ಟಿಗೆ ಇರಬೇಕೆಂದು ವಿಧಿಸಿದರು. ನಮ್ಮ ಪ್ರಾರ್ಥನೆ, ಶ್ಲೋಕ, ಪಠಣಗಳಿಗೆ ಅಡ್ಡಿ ಬರುತ್ತಿದ್ದರೆಂದು ನಾವು ಅವ-ರೊಡನೆ ಸೇರುವು ದಿಲ್ಲವೆಂದು ಹಠ ಮಾಡಿದಾಗ ಜೈಲಿನ ಅಧಿಕಾರಿ ಆಕ್ಷೇಪಿಸಿದರು. ಅಷ್ಟೇ ಅಲ್ಲ ಇದಕ್ಕಾಗಿ ನಾನು ಪ್ರತಿಭಟಿಸಿದಾಗ ನನ್ನನ್ನು ಕಠಿಣ ಶಿಕ್ಷೆಗೆ ಒಳಪಡಿಸಿ ಕತ್ತಲಕೋಣೆಗೆ ನೂಕಿದರು. ಮಲಮೂತ್ರ ವಿಸರ್ಜನೆಗೆ ಅಲ್ಲಿರುವ ಅನಾನುಕೂಲತೆ- ಯನ್ನು ನೆನಪಿಸಿಕೊಳ್ಳಲು ಅಸಹ್ಯ. ಅಲ್ಲಿದ್ದ ಹದಿನೆಂಟು ದಿನಗಳೂ ಒಂದು ತೊಟ್ಟೂ ನೀರು ಕುಡಿಯದೆ, ಕೊಟ್ಟ ಹಣ್ಣು ಆಹಾರವನ್ನು ನಿರಾಕರಿಸಿದೆ. ಜೈಲಿನಿಂದ ಬಿಡುಗಡೆಯಾದ ಮೇಲೆ ನನ್ನ ಶಾರೀರಿಕ ನಿಶ್ಶಕ್ತಿಗೆ ಚಿಕಿತ್ಸೆಯನ್ನೇ ಮಾಡಬೇಕಾಯಿತು. ಆ ಸಂದರ್ಭದಲ್ಲಿಯೇ ನಾನು ಮೊದಲು ಗಾಂಧಿಯನ್ನು ಭೇಟಿಯಾದದ್ದು.

ಮಹಾತ್ಮಗಾಂಧಿಯವರು ಹರಿಜನ ಫಂಡಿಗಾಗಿ ಕರ್ನಾಟಕದಲ್ಲಿ ಟೂರ್ ಮಾಡುತ್ತಿದ್ದರು. ಇಲ್ಲೇ ಗಾಂಧಿ ಇಳಿದುಕೊಂಡಿದ್ದ ಭವನದ ಬಳಿ ಬೆಳಿಗ್ಗೆ 4.30 ಗಂಟೆಗೆ ಯಾರೂ ಇರದ ಸಮಯದಲ್ಲಿ ಗಾಂಧಿಯವರ ದರ್ಶನ ಮಾಡಲು ಹೋದೆ. ನೂಲು ತೆಗೆಯುತ್ತಾ ಗಾಂಧಿ ಕುಳಿತಿದ್ದರು. ನಮಸ್ಕಾರ ಮಾಡಿ ಪರಿಚಯ ಮಾಡಿಕೊಂಡೆ. ಆ ವೇಳೆಗಾಗಲೇ ನನ್ನ ವಿಷಯ ಕೇಳಿದ್ದ ಗಾಂಧಿ 'ಬಹಾದ್ದೂರ್ ಲಡಕೀ ಹೈ' ಎಂದು ನನಗೆ ಹೇಳಿದರು. ನನ್ನ ಸಂಗಡ ವಾರ್ಧಾಕ್ಕೆ ಬರುತ್ತೀಯ? ಅಂತ ಕೇಳಿದರು. ಸ್ವಾಗತಾಧ್ಯಕ್ಷರಾಗಿದ್ದ ನಮ್ಮ ತಂದೆ-ಯವರನ್ನು 'ನಿಮ್ಮ ಮಗಳನ್ನು ಕರೆದುಕೊಂಡು ಹೋಗುತ್ತೇನೆ. ನಿಮ್ಮ ಅನುಮತಿ ಇದೆಯೇ?' ಎಂದು ಪ್ರಶ್ನಿಸಿದರು. ನನ್ನ ತಂದೆಯವ-ರಾದರೋ 'ಅದು ನನ್ನ ಮತ್ತು ನನ್ನ ಮಗಳ ಪೂರ್ವಜನ್ಮದ ಭಾಗ್ಯ ಎಂದು ತಿಳಿಯುತ್ತೇನೆ' ಎಂದು ಸಂತೋಷದಿಂದ ಕಳುಹಿಸಿಕೊಟ್ಟರು.

1934ರಲ್ಲಿ ಗಾಂಧಿಯೊಡನೆ ವಾರ್ಧಾಕ್ಕೆ ಹೋದ ನಾನು 1982ರವರೆಗೆ ಅಲ್ಲಿಯೇ ನೆಲೆಸಿದ್ದೆ. ಆಚಾರ್ಯ ವಿನೋಬಾಜಿಯವರ ಸಂಗಡವೇ ಇದ್ದೆ. ವಿನೋಬಾಜಿಯವರೊಡನೆ ಅವರ ಸೇವಾ ಕಾರ್ಯದರ್ಶಿಯಾಗಿ ಕೆಲಸ ಮಾಡುತ್ತಿದ್ದೆ. ಅವರೊಡನೆ ಭೂದಾನ ಚಳುವಳಿಯ ಪಾದಯಾತ್ರೆಯಲ್ಲೂ ಭಾಗವಹಿಸಿರುವೆ.

ಅಂದು ಮಹಿಳೆಯರು ಕರನಿರಾಕರಣ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದನ್ನು ನೋಡಿರುವೆ. ಜನರು ಕರ ಕೊಡಲಿಲ್ಲ ಎಂದು ಬ್ರಿಟೀಶರು ಹಳ್ಳಿ ಜಫ್ತಿ ಮಾಡಿದರು. ಸಾಮಾನು ಲಿಲಾವು ಮಾಡುತ್ತಿದ್ದರು. ಕೆಲವು ವೇಳೆ ಮಕ್ಕಳನ್ನೂ ಚೆನ್ನಾಗಿ ಹೊಡೀತಿದ್ದರು. ಆಗ ಮಕ್ಕಳನ್ನು ಕರೆದುಕೊಂಡು ಬಂದು ಶಿವಮೊಗ್ಗೆಯಲ್ಲಿ ಆಶ್ರಮ ಮಾಡಿಟ್ಟುಕೊಂಡು ನೋಡಿಕೊತಿದ್ದೆವು. ಜಫ್ತಿ ಮಾಡಿದ ಸಾಮಾನುಗಳನ್ನು ಲಿಲಾವು ಮಾಡಿದಾಗ ಅದನ್ನು ನಮ್ಮ ಜನರೇ ಕೊಂಡುಕೊಳ್ಳಲಿಕ್ಕೆ ಹೋದಾಗ ನಾವು ಅವರಿಗೆ ಬುದ್ಧಿ ಹೇಳುತ್ತಿದ್ದೆವು, ಪಿಕೆಟಿಂಗ್ ಮಾಡುತ್ತಿದ್ದೆವು. ಪೊಲೀಸರು ಗಂಡಸರಿಗೇ ಹೆಚ್ಚು ಹೊಡೀತಿದ್ದರು. ಆದ್ದರಿಂದ ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ನಾವು ಹೆಂಗಸರು ಪಿಕೆಟಿಂಗ್ ಮಾಡುತ್ತಿದ್ದೆವು. ಕೆಲವೊಮ್ಮೆ ಹೆಂಗಸರಿಗೂ ಪೆಟ್ಟು ಬಿದ್ದಿದೆ. ಹೀಗೆ ಗೌರಮ್ಮನವರು ಪೆಟ್ಟು ತಿಂದಿದ್ದರು. ಮತ್ತೆ ನನ್ನ ತಂಗಿಯೊಬ್ಬಳು ಕಾವೇರಮ್ಮ ಅಂತ ಅವಳೂ ಪೆಟ್ಟು ತಿಂದಿದ್ದಳು. ನನಗೆ ಸ್ವಲ್ಪಾನೇ ಪೆಟ್ಟು ಬಿದ್ದಿತ್ತು. ಆದರೆ ನನ್ನನ್ನು ಜೈಲಿಗೆ ಹಾಕಿದರು.''

ಚಿಕ್ಕವಯಸ್ಸಿನಲ್ಲೇ ವಿಧವೆಯಾಗಿ ಸಂಸಾರದ ಜವಾಬ್ದಾರಿಯನ್ನು ಹೊರಬೇಕಾಗಿರದ್ದರಿಂದ ಮಹಾದೇವಿ ತಾಯಿ ತಮ್ಮ ಇಡೀ ಬದುಕನ್ನು ಸ್ವರಾಜ್ಯದ ಹೋರಾಟಕ್ಕಾಗಿ ಮುಡುಪಾಗಿಟ್ಟರು. ತಂದೆಯ ಮತ್ತು ಅತ್ತೆಯ ಮನೆಯೆರಡರಲ್ಲೂ ಇದ್ದ ಸ್ವಾತಂತ್ರ್ಯ ಹೋರಾಟದ ಕಾವು ಅವರ ಒಟ್ಟು ಬದುಕಿಗೆ ಅರ್ಥಪೂರ್ಣ ಹಿನ್ನೆಲೆಯನ್ನು ಒದಗಿಸಿತು. ಗಾಂಧಿ, ವಿನೋಬಾರವರ ವ್ಯಕ್ತಿತ್ವದ ಆದರ್ಶ ಮಹಾದೇವಿ ತಾಯಿಯವರ ಹೋರಾಟದ ಮೂಲಸೆಲೆಯಾಗಿದೆ.

-ಆಶಾ

## ಶ್ರೀ ಎಂ.ಎಸ್. ಜೋಯಿಸ್‌ರವರೊಡನೆ ಹತ್ತು ನಿಮಿಷ

ಮೈಸೂರಿನ ಮಧ್ಯಭಾಗದಲ್ಲಿರುವ ಸೋನಾರ್ ಬೀದಿ, ಅದರಲ್ಲೊಂದು ಹಳೆಯ ಮನೆ. ಇತಿಹಾಸವನ್ನು ಸೃಷ್ಟಿಸಿದ ಮನೆ, ಕನಸುಗಳನ್ನು ಕಂಡಮನೆ, ತನ್ನನ್ನು ಭವ್ಯವಾಗಿ ಸಿಂಗರಿಸಿಕೊಳ್ಳಲು ಸಾಧ್ಯವಿದ್ದೂ, ಅಂಥ ಸಾಧ್ಯತೆಗಳನ್ನೆಲ್ಲ ತಳ್ಳಿಹಾಕಿ ನಿರಾಡಂಬರವಾಗಿ ಹಳೆಯದಾಗುತ್ತಲೇ ಉಳಿದಿರುವ ಮನೆ. ಅದು ಸ್ವಾತಂತ್ರ್ಯ ಹೋರಾಟಗಾರ ಶ್ರೀ ಎಂ.ಎಸ್. ಜೋಯಿಸ್‌ರವರ ಮನೆ. ಮುಂಬಾಗಿಲು ಬೀದಿಗೆ ಕಾಣದಂತೆ ಇರುವ ಎತ್ತರದ ಕಾಂಪೌಂಡ್ ಅದಕ್ಕೊಂದು ಪುಟ್ಟಬಾಗಿಲು. ದಾಟಿಹೋದರೆ ಪುಟ್ಟದೊಂದು ಕಲ್ಲುಹಾಸಿರುವ ಅಂಗಳ ಅದರಲ್ಲೊಂದು ಮರ, ಅದರ ನಿಲುವೂ ಜೋಯಿಸ್ ದಂಪತಿಗಳಂತೆ ಅನವಶ್ಯಕವಾಗಿ ಯಾರ ಕಣ್ಣಿಗೂ ಬೀಳದಂತೆ ತನ್ನಷ್ಟಕ್ಕೆ ತಾನು ತನ್ನ ಕರ್ತವ್ಯಕ್ಕೆ ಅತುಕೊಂಡಿರುವ ಮರ!

ಮನೆಯ ಒಳಾಂಗಣ ತಂಪಾದ ದೇವಾಲಯದಂತೆ. ಅಷ್ಟೇನೂ ಎತ್ತರವಲ್ಲದ ಹಲಗಸೇವೆಯ ಮಾಡು. ಗೋಡೆಯಲ್ಲಿನ ದೇವಾನುದೇವತೆಯರ ಹಾಗೂ ದೇಶಭಕ್ತರ ಫೋಟೋಗಳು, ಆಯಾಚಿತವಾಗಿ ನಮ್ಮನ್ನು ಒಂದಿಷ್ಟು ಇತಿಹಾಸದ ಯುಗದಲ್ಲಿ ಮುಳುಗಿಸಿ ಬಿಡುತ್ತವೆ. ಒಂಬತ್ತು ದಶಕಗಳಿಗೂ ಮಿಕ್ಕು ಈ ನೆಲದ ನಂಟಿನೊಡನೆ ಬಾಳುತ್ತಿರುವ ಆದರ್ಶ ಪುರುಷ ಶ್ರೀ ಎಂ.ಎಸ್. ಜೋಯಿಸ್, ಗಾಂಧೀಜಿಯವರು ಹಾಕಿದ ರಾಜಕೀಯ ಬದುಕಿನಗೆರೆಗಳನ್ನು ದಾಟದ ಮಹಾನ್‌ಮೇಧಾವಿ. ತೊಂಬತ್ತೆರಡರ ಪ್ರಾಯದಲ್ಲೂ ದೇಶದ ಎಲ್ಲ ಆಗುಹೋಗುಗಳನ್ನು ಗ್ರಹಿಸುವ ವಿಮರ್ಶಿಸುವ, ಅಭಿವ್ಯಕ್ತಿಸುವ ತೀಕ್ಷ್ಣ ಪ್ರಜ್ಞೆಯನ್ನು ಉಳಿಸಿ ಕೊಂಡಿರುವ ಜೋಯಿಸರು ಅಪರೂಪದ ಅದ್ಭುತವ್ಯಕ್ತಿ.

ನಾವು ಅದೇ ರಸ್ತೆಯ ನಿವಾಸಿಗಳಾಗಿದ್ದವರು. ಬಾಲ್ಯದಿಂದ ಜೋಯಿಸರನ್ನು ಕಂಡವರು. ಹಾಗಾಗಿ ಒಂದಿಷ್ಟು ಸಲುಗೆ. ಆದರೂ ಜೋಯಿಸರು ಗಾಂಧಿಕಾಲದ ಮೌಲ್ಯಗಳನ್ನು ಒಪ್ಪಿ ಅಪ್ಪಿ ಕೊಂಡವರು ''ನಿನ್ನೆ ಬರ್ತೀನಿ ಅಂದವರು ಈಗ ಬರ್ತಿದ್ದೀರಲ್ಲ. ನಾನು ಬೆಳಿಗ್ಗೆ 9 ಗಂಟೆಗೆ ಬೇರೆ ಪತ್ರಿಕೆಯವರಿಗೆ ಬರಲು ಹೇಳಿದ್ದೀನಿ ಈಗ ನಿಂಜೊತೆ ಮಾತಾಡೋಕೆ ಸಮಯವಿಲ್ಲ ಹೋಗು'' ಎನ್ನುವ ನಿಷ್ಠುರ ಉತ್ತರ. ಆಗ ಸಮಯ ಬೆಳಗಿನ ಎಂಟು ನಲವತ್ತೈದು! ಬೆಂಗಳೂರಿನಿಂದ ಮೈಸೂರಿಗೆ ಇದಕ್ಕಾಗಿ ಮತ್ತೆ ಬರಬೇಕಲ್ಲ ಎನ್ನುವ ಜಂಜಾಟ. ''ಇಲ್ಲ ಹತ್ತೇ ನಿಮಿಷದಲ್ಲಿ ನಮ್ಮ ಸಂದರ್ಶನ ಮುಗಿಸಿಬಿಡುತ್ತೇವೆ'' ಎನ್ನುವ ಬೇಡಿಕೆ.

''ಹತ್ತು ಅಂದ್ರೆ ಹತ್ತೇ ನಿಮಿಷ ಆಗುತ್ತೇನಮ್ಮ?'' ಜೋಯಿಸರ ಕಂಚಿನ ಕಂಠದ ಪ್ರಶ್ನೆಗೆ ನನ್ನ ಕ್ಷೀಣಧ್ವನಿಯ ಉತ್ತರ ''ಪ್ರಯತ್ನ ಮಾಡ್ತೀನಿ'' ಆತ ನಿಜಕ್ಕೂ ಪ್ರಚಂಡ ಮನುಷ್ಯ. ನನ್ನ ಐದು ಪ್ರಶ್ನೆಗಳಿಗೆ ನೇರವಾದ ಆದರೆ ಎಷ್ಟುಬೇಕೋ ಅಷ್ಟೇ ಆದ, ಒಂದಿಷ್ಟೂ ಮಾತಿನ

ದುಂದುಗಾರಿಕೆ ಇಲ್ಲದಂತೆ ಉತ್ತರಿಸಿ, ಆ ಉತ್ತರಗಳ ನಿಖರತೆಗೆ ಬೆರಗಾಗುತ್ತಿದ್ದ ನನ್ನನ್ನು ''ಈಗ ಒಂಬತ್ತು ಗಂಟೆ. ನಿಮ್ಮ ಹತ್ತು ನಿಮಿಷದ ಕಾಲಾವಧಿ ಮುಗಿದಿದೆ ಹೊರಗಡೆ ಬೇರೆ ಪತ್ರಿಕೆಯವರು ಕಾಯುತ್ತಿದ್ದಾರೆ ನೀವಿನ್ನು ಹೋಗಬಹುದು'' ಎಂದಾಗ ಅತ್ಯಂತ ಅಚ್ಚರಿಯಿಂದ ಜ್ಞಾನ ತಪ್ಪುವ ಸ್ಥಿತಿ ನನ್ನದಾಗಿತ್ತು. ಹಿಮಾಲಯದಂಥ ಮೇರು ವ್ಯಕ್ತಿತ್ವ ಎಂದರೆ ಇದೇ ಅಲ್ಲವೇ ಎನ್ನುವ ಬೆರಗಿನಲ್ಲಿ ಮುಳುಗಿಹೋಗಿದ್ದೆ.

ನಮ್ಮ ಅಚಲಾದ ಪ್ರಶ್ನೆಗಳೂ ಜೋಯಿಸರ ಉತ್ತರಗಳೂ ಈಗ ನಿಮ್ಮ ಮುಂದೆ.

**ಅಚಲ- ನಿಮ್ಮ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ನೀವು ಕಂಡ ವಿಶಿಷ್ಟ ಮಹಿಳೆಯರು ಯಾರು?**

**ಜೋಯಿಸರು-** ನೀವು ರಾಷ್ಟ್ರಮಟ್ಟದಲ್ಲಿ ಕೇಳಿದ್ದೀರೋ ರಾಜ್ಯ ಮಟ್ಟದಲ್ಲೋ?

ಯಾಕೆಂದ್ರೇ ರಾಷ್ಟ್ರಮಟ್ಟದಲ್ಲಿ ಅಂದರೆ ನನಗೆ ಉತ್ತರ ಸರಿಯಾಗಿ ಗೊತ್ತಿಲ್ಲ. ನಾವೆಲ್ಲ ರಾಜ್ಯಮಟ್ಟದಲ್ಲಿ, ನಮ್ಮ ನಮ್ಮ ಪ್ರಾದೇಶಿಕ ನೆಲೆಯಲ್ಲಿ ಸ್ವಾತಂತ್ರ್ಯಕ್ಕಾಗಿ ಕೆಲಸ ಮಾಡಿದವರು. ರಾಜ್ಯಮಟ್ಟದಲ್ಲೇ ಆದರೆ ನನ್ನ ಕಾಲಕ್ಕೆ ಆಗಲೆ ಬಹಳಷ್ಟು ಮಹಿಳೆಯರು ನಮ್ಮ ಜೊತೆ ಕೆಲಸ ಮಾಡುತ್ತಿದ್ದರು. ಯಶೋಧರಮ್ಮ ದಾಸಪ್ಪ, ಬಳ್ಳಾರಿಸಿದ್ದಮ್ಮ, ಗೌರಮ್ಮ, ಸುನಂದಮ್ಮ, ನಾಗವೇಣಿಬಾಯಿ, ಸೀತಾಬಾಯಿಗಣೇಶ ಹೆಗಡೆ - ಒಬ್ಬರೇ? ಇಬ್ಬರೇ? ನನ್ನ ಪಾಲಿಗೆ ಎಲ್ಲರೂ ವಿಶಿಷ್ಟ ಮಹಿಳೆಯರೇ. ನಾನು ಜೈಲಿನಲ್ಲಿದ್ದಾಗ ನನ್ನ ಪರವಾಗಿ ಸುಬ್ಬರಾಯನ ಕೆರೆ ಮೈದಾನದಲ್ಲಿ 1938ರ ಜನವರಿ 26ರಂದು ಬಾವುಟಹಾರಿಸಿ ವರ್ಷದ ಕೂಸನ್ನು ಕಂಕುಳಲ್ಲಿರಿಸಿಕೊಂಡೇ ಜೈಲಿಗೆ ನಡೆದ ನನ್ನ ಹೆಂಡತಿ ಸುಬ್ಬಮ್ಮ ಸಹ ವಿಶಿಷ್ಟ ಮಹಿಳೆಯೇ.

**ಅಚಲ- ಸಾಮಾನ್ಯವಾಗಿ ಮಹಿಳೆಯರು ಎಂತಹ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದರು? ಹೇಗೆ?**

**ಜೋಯಿಸರು-** ಚಟುವಟಿಕೆಗಳು ಪುರುಷರಿಗೇ ಬೇರೆ ಮಹಿಳೆಯರಿಗೆ ಬೇರೆ ಅಂತಿರ್‍ಲಿಲ್ಲ. 1930ರ ಆಂದೋಲನದಲ್ಲಿ ಸ್ತ್ರೀಪುರುಷರೆಲ್ಲರೂ ಭಾಗವಹಿಸಿದ್ದರು. ಎಲ್ಲ ಕಾರ್ಯಕರ್ತರಿಗೂ ಅವರವರ ಸಾಮರ್ಥ್ಯಕ್ಕೆ ತಕ್ಕಹಾಗೆ ಕೆಲಸಗಳಿರುತ್ತಿದ್ದವು. ಪ್ರಭಾತ್‌ಫೇರಿ, ಕರಪತ್ರಗಳನ್ನು ಪ್ಯಾಕ್ಸ್ ಮಾಡಿ ಪರಊರುಗಳಿಗೆ ಕಳಿಸುವುದು, ಸತ್ಯಾಗ್ರಹ, ಪಿಕೆಟಿಂಗ್ ಎಲ್ಲ ಚಟುವಟಿಕೆಗಳಲ್ಲಿ ಎಲ್ಲರೂ ಭಾಗವಹಿಸುತ್ತಿದ್ದೆವು.

**ಅಚಲ- ಸ್ತ್ರೀಪುರಷರ ನಡುವೆ ಸಂಘಟನೆಯಲ್ಲಿ ತಾರತಮ್ಯಗಳು ಇದ್ದವೇ?**

**ಜೋಯಿಸರು-** ಖಂಡಿತಾ ಇಲ್ಲ. ನಮ್ಮೆಲ್ಲರ ಗುರಿಗಳು ಒಂದೇ ಆಗಿದ್ದವು. ದೇಶ ಸ್ವತಂತ್ರವಾಗಬೇಕು. ಜವಾಬ್ದಾರಿಯುತ ಸರ್ಕಾರ ನಿರ್ಮಾಣವಾಗಬೇಕು. ಆದ್ದರಿಂದ ಸಂಘಟನೆಯ ರೀತಿ ಒಂದೇ ಆಗಿತ್ತು. 1937ರಲ್ಲಿ ಬಹಳಷ್ಟು ಮಹಿಳೆಯರು ಸ್ವಯಂ ಸೇವಕಿಯರಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಗಂಡಸರು ಮಾಡುವ ಎಲ್ಲ ಕೆಲಸಗಳನ್ನೂ ಹೆಂಗಸರೂ ಮಾಡುತ್ತಿದ್ದರು. ಸ್ವತಃ ನನ್ನ ಹೆಂಡತಿಯೇ ನಾನು ಜೈಲಿನಲ್ಲಿದ್ದಾಗ ನನ್ನ ಜವಾಬ್ದಾರಿಯನ್ನೆಲ್ಲ ನಿಭಾಯಿಸುತ್ತಿದ್ದಳು. ಸುಬ್ರಾಯನಕೆರೆ ಅಂಗಳದಲ್ಲಿ ಬಾವುಟ ಹಾರಿಸುವುದರಿಂದ ಹಿಡಿದು ಕರಪತ್ರಗಳನ್ನು ಗುಟ್ಟಾಗಿ ಊರೂರಿಗೆ ತಲುಪಿಸುವವರೆಗೆ ಅವಳ ಕೆಲಸದವ್ಯಾಪ್ತಿ ಹರಡಿರುತ್ತಿತ್ತು. ಯಶೋಧರಮ್ಮ ದಾಸಪ್ಪನವರು ಯಾವ ಗಂಡಿಗೂ ಕಡಿಮೆಯಿಲ್ಲದಂತೆ ಸ್ವಯಂ ಸೇವಕರನ್ನು ಸಂಘಟಿಸಿ ನಾಯಕತ್ವವಹಿಸಿ ಧ್ವಜಸ್ಥಂಭವನ್ನು ಕಾಯ್ದುಕೊಂಡು ಪೊಲೀಸರನ್ನು ಎದುರಿಸಿ ನಿಂತಿದ್ದು ಇಂದಿಗೂ ನನ್ನ ಕಣ್ಣಮುಂದೆ ಬರುತ್ತಿರುತ್ತದೆ. ಪಿಕೆಟಿಂಗ್‌ಗೆ ಹೋಗುವಾಗ ಸಹ ಎಲ್ಲ ಒಟ್ಟಿಗೆ ಹೋಗುತ್ತಿದ್ದೆವು. ಕುಡಿತದ ವಿರುದ್ಧ ಪಿಕೆಟಿಂಗ್ ಮಾಡಿದಾಗ ಹೆಂಡದ ಗಡಿಗೆ ಸುರಿದರೂ ಈ ಹೆಂಗಸರು ಅಚಲವಾಗಿ ನಿಂತು ಎಲ್ಲ ಸಹಿಸಿ ಮತ್ತೆ ತಮ್ಮ ಕಾರ್ಯಾಚರಣೆ ಮುಂದುವರೆಸಿದರು. ಒಮ್ಮೆ ಮೈಸೂರಿನ ಹತ್ತಿರ ಸಂತೆಮರಳ್ಳಿ ಎಂಬಲ್ಲಿ ನಮ್ಮ ಭಾಷಣ ಕಾರ್ಯಕ್ರಮವಿತ್ತು. ಕೆಲವು ಕಿಡಿಗೇಡಿಗಳು ಇದನ್ನು ಕೆಡಿಸುವ ಕುತಂತ್ರಮಾಡಿದರು. ನಾವು ಅಂದರೆ ನಾನು, ಯಶೋಧರಮ್ಮ, ಬಳ್ಳಾರಿಸಿದ್ದಮ್ಮ, ಸುಬ್ಬಮ್ಮ ಮುಂತಾದವರು ವೇದಿಕೆ ಮೇಲಿದ್ದೆವು. ಸಿದ್ದಮ್ಮ ಮಾತನಾಡಲು ನಿಂತರು, ದೂರದಿಂದ ಕಲ್ಲುಗಳನ್ನು ಬೀರಲಾರಂಭಿಸಿದರು. ನನಗೆ, ಎಲ್ಲರಿಗೆ ಕಲ್ಲೇಟು ಬಿದ್ದವು. ಸಿದ್ದಮ್ಮನವರಿಗೆ ಸೀದಾ ಹಣೆಗೇ ಬಿದ್ದು ರಕ್ತ ಸುರಿಯಲಾರಂಭಿಸಿತು. ತಕ್ಷಣ ಯಶೋಧರಮ್ಮ ತಮ್ಮ ಸೆರಗು ಹರಿದು ಪಟ್ಟಿ ಕಟ್ಟಲು ಬಂದರು. ಆಗ ಸಿದ್ದಮ್ಮ ಹೇಳಿದ ಮಾತು ಇನ್ನೂ ನನ್ನ ಕಿವಿಯಲ್ಲಿ ಗುನುಗುಟ್ಟುತ್ತಿರುತ್ತಿದೆ ''ಇರಲಿ ಬಿಡಿ, ನನ್ನ ನಾಡಿಗೆ ನನ್ನ ರಕ್ತದ ಅವಶ್ಯಕತೆ ಇದ್ದರೆ ನನ್ನ ದೇಹದ ಕೊನೆಯ ಹನಿಯವರೆಗೂ ಹರಿದುಹೋಗಲಿ. ಆದರೆ ಈ ನಮ್ಮ ಜನಕ್ಕೆ ಸ್ವಾತಂತ್ರ್ಯದ ಅರಿವು ಮೂಡಬೇಕು. ಅದಕ್ಕಾಗಿ ನನ್ನ ರಕ್ತ ಈ ಭೂತಾಯಿಗೆ ಕುಡಿಸುತ್ತೇನೆ'' ಎಂದು ಸುರಿಯುತ್ತಿದ್ದ ರಕ್ತವನ್ನು ಸೆರಗಿನಲ್ಲಿ ಒತ್ತಿ ಭೂಮಿಗೆ ಹಿಂಡಲಾರಂಭಿಸಿದರು. ಈ ದೃಶ್ಯ ಕಂಡು ಜನ ಅವಾಕ್ಕಾದರು. ಕಲ್ಲುಬೀರಿದವರೂ ಆಶ್ಚರ್ಯದಿಂದ ತೆಪ್ಪಗಾಗಿ ಹೋದರು.

**ಅಚಲ- ಆಗ ಮುಖ್ಯವಾಗಿ ಸ್ತ್ರೀ ವಿಷಯಗಳಿಗೆ/ಕಾಳಜಿಗಳಿಗೆ ಸ್ವಾತಂತ್ರ್ಯ ಚಳುವಳಿ ಯಾವರೀತಿ ಸ್ಪಂದಿಸುತ್ತಿತ್ತು?**

**ಜೋಯಿಸರು-** ಆಗ ಸ್ತ್ರೀಯರಿಗೆ ವಿದ್ಯಾಭ್ಯಾಸದ ಕೊರತೆ ಇತ್ತು. ಇದನ್ನು ನಮ್ಮ ಸ್ವಯಂ ಸೇವಕಿಯರು ಅರಿತು ಆ ದಿಕ್ಕಿನಲ್ಲಿ

ಕೆಲಸಮಾಡಿದರು. ಅದುಬಿಟ್ಟರೆ ಆಗ ಪುರುಷ ಸಮಸ್ಯೆ ಸ್ತ್ರೀಸಮಸ್ಯೆ ಅನ್ನೋ ಪ್ರಬೇಧವೇ ಇರಲಿಲ್ಲ. ನಮ್ಮೆಲ್ಲರ ಮುಂದೆ ಇದ್ದ ಸಮಸ್ಯೆ ಒಂದೇ, ಅದು ಬ್ರಿಟಿಷರು ಭಾರತ ಬಿಡಬೇಕು. ನಾವು ಪ್ರಜಾ-ಪ್ರಭುತ್ವವೆನ್ನುವ ಜವಾಬ್ದಾರಿ ಸರ್ಕಾರವನ್ನು ಸ್ಥಾಪಿಸಬೇಕು.

**ಅಚಲ- ಇಂದಿನ ಹೆಣ್ಣಿನ ಸಮಸ್ಯೆಗಳ/ಸಾಧನೆಗಳ ಬಗ್ಗೆ ನೀವು ಏನು ಹೇಳುತ್ತೀರಿ?**

ಜೋಯಿಸರು- ಸಾಧನೆಗಳು ಉತ್ತಮವಾಗಿವೆ. ಆದರೆ ಸಮಸ್ಯೆಗಳು ಇವೆ. ನಾವು ಆ ದಿನಗಳಲ್ಲಿ ದೃಷ್ಟಿಯಲ್ಲಿಟ್ಟುಕೊಂಡಂಥ ಸಮಾಜ ಸರ್ಕಾರ ಎರಡೂ ಸಮಗ್ರವಾಗಿ ಅಭಿವೃದ್ಧಿಯಾಗಿಲ್ಲ. ಇದಕ್ಕೆಲ್ಲ ಭ್ರಷ್ಟಾಚಾರ ಕಾರಣ. ಈಗ ಮಹಿಳೆಯರಿಗೆ ಶಾಸನ ಸಭೆಗಳಲ್ಲಿ ನೀಡಬೇಕಾದ 33% ವಿಷಯವನ್ನೇ ತೆಗೆದುಕೊಂಡರೆ, ಹಾಗೆ ಮಹಿಳೆಯರು ಕೇಳುವುದು ಸಹಜ. ಜನಸಂಖ್ಯೆಯಲ್ಲಿ ಅರ್ಧದಷ್ಟಿರುವ ಮಹಿಳೆಯರ ನ್ಯಾಯವಾದ ಬೇಡಿಕೆ ಇದು. ಜಾತಿಯ ಗುಂಪುಗಳು ಇದನ್ನು ತಡೆಗಟ್ಟುತ್ತಿವೆ. ಹಿಂದುಳಿದ ಜನಾಂಗದಲ್ಲಿ ಮಹಿಳೆಯರು ತೀರಾ ಹಿಂದುಳಿದಿದ್ದಾರೆ. ಮಹಿಳೆಯರಿಗೆ ಮೀಸಲಾತಿ ಎಂದರೆ ಮುಂದುವರಿದ ಜನಾಂಗವೇ ಬಂದುಬಿಡುತ್ತದೆ ಎನ್ನುವುದು ಕೆಲವು ಪಕ್ಷಗಳ ವಾದ.''

ಇದಕ್ಕೆಲ್ಲಾ ಪರಿಹಾರವನ್ನು ಕೇಳುವ ಮನಸ್ಸಿತ್ತು. ಪ್ರತಿಪ್ರಶ್ನೆ ಆದಮೇಲೂ 'ಇನ್ನೇನಮ್ಮ ಬೇಕು' ಎಂದು ಆತ್ಮೀಯತೆಯಿಂದ ಕೇಳುತ್ತಿದ್ದ ಜೋಯಿಸರು ಐದನೆಯ ಪ್ರಶ್ನೆಗೆ ಉತ್ತರಿಸಿ ''ಅಮ್ಮ ನಿಮ್ಮ ಹತ್ತು ನಿಮಿಷದ ಅವಧಿ ಮುಗಿಯಿತು ಹೊರಗೆ ಜನಕಾಯುತ್ತಿದ್ದಾರೆ'' ಎಂದಾಗ ಗಡಿಯಾರದ ಕಡೆಗೆ ನೋಡದ ಜೋಯಿಸರ ಮುಂದೆ ಕೈಗೆ ಗಡಿಯಾರ ಕಟ್ಟಿದ ನಾನು ತೀರಾ ಕುಬ್ಜಳಾದಂತೆನಿಸಿತು.

ಅಂದು ಜೋಯಿಸರು ಬೆಂಗಳೂರಿಗೆ ಹೊರಟಿದ್ದರು. ಮರುದಿನ ಮುಖ್ಯಮಂತ್ರಿಗಳು ಅವರನ್ನು ಸನ್ಮಾನಿಸುವರಿದ್ದರು. ಜೋಯಿಸರ ಮಕ್ಕಳು, ಸೊಸೆಯರು ನಮಗೆ ತೀರಾ ಪರಿಚಿತರಾದ ಕಾರಣ ನಾವು ಅವರ ಮನೆಯಲ್ಲೇ ಮಾತನಾಡುತ್ತಾ ಕುಳಿತೆವು. ನಮ್ಮ ಎದುರೇ ಜೋಯಿಸರು ಹಿಂದಿನ ಕಾಲದ ಮದುಮಗನಂತೆ ಶಿಸ್ತಾಗಿ ಸಿಂಗರಿಸಿ-ಕೊಂಡು ಪರಿಚಿತರ ಕಾರಿನಲ್ಲಿ ರೈಲ್ವೆ ಸ್ಟೇಶನ್‌ಗೆ ತೆರಳಿ ಅಲ್ಲಿಂದ ರೈಲಿನಲ್ಲಿ ಬೆಂಗಳೂರಿಗೆ ಪ್ರಯಾಣ ಬೆಳಸಿದರು. ಯಾವ ಯಾವುದಕ್ಕೋ ಖಂಡುಗ ಖರ್ಚುಮಾಡುವ ಸರ್ಕಾರಕ್ಕೆ ತೊಂಬತ್ತೆರಡು ವರ್ಷದ ವೃದ್ಧರನ್ನು ಸನ್ಮಾನಿಸಲು ಇಲ್ಲೇ ಹತ್ತಿರವಿರುವ ಮೈಸೂರಿಗೆ ಸರ್ಕಾರಿ ಕಾರನ್ನು ಕಳಿಸಿ ಹಿರಿಯರನ್ನು ಕರೆಸಿಕೊಂಡು ಸನ್ಮಾನಮಾಡುವ ಸೌಜನ್ಯವಿಲ್ಲವಲ್ಲ ಎನಿಸಿ ಹೃದಯ ಭಾರವಾಯಿತು.

ಜೋಯಿಸರು ಮನಸ್ಸುಮಾಡಿದ್ದರೆ ಏನೆಲ್ಲ ಆಗಬಹುದಿತ್ತು. ಇಂದಿಗೂ ಸಕ್ರಿಯವಾಗಿ ರಾಜಕಾರಣದಲ್ಲಿ ತೊಡಗಬಹುದಿತ್ತು. ಈ ರಾಜ್ಯದ ಮುಖ್ಯಮಂತ್ರಿಯಾಗಬಹುದಿತ್ತು. ರಾಷ್ಟ್ರರಾಜಕಾರಣದಲ್ಲಿ ಪಾಲ್ಗೊಳ್ಳಬಹುದಿತ್ತು. ಕಡೆಯ ಪಕ್ಷ ತಮ್ಮ ಮಕ್ಕಳನ್ನು ಸುಭದ್ರ ಸರ್ಕಾರಿ ನೆಲೆಗಳಲ್ಲಿ ನಿಲ್ಲಿಸಬಹುದಿತ್ತು. ಆದರೆ ಜೋಯಿಸರು ಇದ್ಯಾವುದನ್ನೂ ಮಾಡಲಿಲ್ಲ. ಅವರು ಪದೇ ಪದೇ ಹೇಳಿದ ಗುರಿಯ ಪರಿಧಿ ಸ್ವಾತಂತ್ರ್ಯ ಮಾತ್ರವಾಗಿತ್ತು. ಅಧಿಕಾರ ಕುರ್ಚಿಗಳ ಕಲ್ಪನೆ ಜೋಯಿಸರು ಕನಸುಗಳಲ್ಲಿ ಒಂದೆಳೆಯೂ ಇರಲಿಲ್ಲ. ಆದ್ದರಿಂದಲೇ ಎತ್ತರಕ್ಕೆ ಬೆಳೆದ ನಿಸ್ವಾರ್ಥದ ವ್ಯಕ್ತಿತ್ವ ನಮ್ಮನ್ನು ಅತ್ಯಂತ ಬೆರಗುಗೊಳಿಸಿಬಿಡುತ್ತದೆ.

-ಶಾಂತಾ ನಾಗರಾಜ್

## ಬಾಳಿನಲ್ಲೂ ಹೋರಾಟದಲ್ಲೂ ಜೊತೆಗಾತಿ!

***ಶ್ರೀ ಎಂ.ಎನ್. ಜೋಯಿಸ್‌ರವರ ಪತ್ನಿ ಸುಬ್ಬಮ್ಮ (1910-1981) ಮೈಸೂರು ಪ್ರಾಂತ್ಯದಲ್ಲಿ ತನ್ನ ಪುಟ್ಟ ಮಗುವಿನೊಡನೆ ಜೈಲುಸೇರಿದ ಪ್ರಥಮ ಸ್ವಾತಂತ್ರ್ಯ ಯೋಧೆ. ಗಂಡ ಚಳುವಳಿಯಲ್ಲಿದ್ದರು ಎನ್ನುವ ಕಾರಣಕ್ಕೆ ಸ್ವಾತಂತ್ರ ಚಳುವಳಿ ಸೇರಿದರೂ ಗಂಡನ ಹೆಜ್ಜೆಯಲ್ಲಿ ಹೆಜ್ಜೆಯಿಡುವ ಹಿಂಬಾಲಕಿ ಮಾತ್ರವಾಗಿರಲಿಲ್ಲ ಸುಬ್ಬಮ್ಮ. ತಮ್ಮದೇ ಸ್ವಂತ ಕಾರ್ಯಕ್ರಮಗಳನ್ನು ರೂಪಿಸಿಕೊಂಡು 1930 ರಿಂದ ಕಾಂಗ್ರೆಸ್ ಕಾರ್ಯಕರ್ತರಾಗಿ ದುಡಿದ ಮಹಿಳೆ ಈಕೆ.***

*ಸ್ವತಃ ಸುಬ್ಬಮ್ಮನವರೇ ಹೇಳಿ ಬರೆಸಿದ ಒಂದು ಸಂದರ್ಶನದ ಲೇಖನವನ್ನು ಎಂ.ಎನ್. ಜೋಯಿಸರ ಅಭಿನಂದನಾ ಗ್ರಂಥ 'ಸ್ವಾತಂತ್ರ್ಯದೆಡೆಗೆ' ದಿಂದ ಆರಿಸಿ ನಮ್ಮ ಅಚಲ ಓದುಗರಿಗಾಗಿ ನೀಡುತ್ತಿದ್ದೇವೆ :*

''1930ರ ಆಂದೋಲನದಲ್ಲಿ ಪತಿ ಭಾಗವಹಿಸಿದ್ದರು. ಹತ್ತಾರು ವರ್ಷಗಳಿಂದ ನಮ್ಮೂರಿನಲ್ಲಿ ಕಾಂಗ್ರೆಸ್ ಕಾರ್ಯಕರ್ತರಾಗಿ ಅವರು ನಡೆಸುತ್ತಿದ್ದ ಕಾರ್ಯಗಳು ನನ್ನ ಮೇಲೆ ಸಾಕಷ್ಟು ಪರಿಣಾಮ ಬೀರಿದ್ದುವು. ಆದ್ದರಿಂದ ಇವರನ್ನು ಹಿಂಬಾಲಿಸಿ ಸಿರಸಿ, ಸಿದ್ದಾಪುರಕ್ಕೆ ನಾನೂ ಹೊರಟೆ. ಅಲ್ಲಿ ಆರೇಳು ತಿಂಗಳುಗಳ ಕಾಲ ಭೂಗತ ಚಟುವಟಿಕೆಗಳಲ್ಲಿ ಭಾಗವಹಿಸಿದೆ. ಅಲ್ಲಿ ಮೊಟ್ಟಮೊದಲು ನನ್ನ ಪಾಲಿಗೆ ಬಂದ ಕೆಲಸ, ಕರಪತ್ರಗಳನ್ನು ಪೇಸ್ಟ್ ಮಾಡಿ ಬೇರೆ ಊರಿಗೆ ಕಳುಹಿಸುವುದು. ಅನಂತರದಲ್ಲಿ ಹಳ್ಳಿಗಳಿಗೆ ಹೋಗಿ ಜಂಗಲ್ ಸತ್ಯಾಗ್ರಹದಲ್ಲಿ ಹಾಗೂ ಮೆರವಣಿಗೆಗಳಲ್ಲಿ ಹಳ್ಳಿಯ ಜನಗಳೆಲ್ಲ ಭಾಗವಹಿಸುವಂತೆ ಪ್ರಚಾರ ಮಾಡತೊಡಗಿದೆ. ಕರನಿರಾಕರಣೆಯ

ಜೊತೆಗೆ ಸಿದ್ದಾಪುರ ತಾಲ್ಲೂಕಿನಲ್ಲಿ ಜಂಗಲ್ ಸತ್ಯಾಗ್ರಹ, ಮೆರವಣಿಗೆಗಳು ಹುರುಪಿನಿಂದ ನಡೆಯುತ್ತಿದ್ದುವು. ಆದರೆ ಸಿರಸಿಯಲ್ಲಿ ಈ ಚಳುವಳಿ ಅಷ್ಟೇನೂ ಯಶಸ್ಸು ಕಾಣಲಿಲ್ಲ. ಆದರೂ ಅಲ್ಲಿ ಪ್ರಭಾತಫೇರಿ, ಧ್ವಜವಂದನೆ, ಕಾಯಿದೆ ಉಲ್ಲಂಘನಾ ಚಳುವಳಿಗಳು ಯಶಸ್ವಿಯಾಗಿ ಜರುಗುತ್ತಿದ್ದುವು. ಈ ಸಂದರ್ಭದಲ್ಲಿ ಶಿಂಧೆ ಗ್ರಾಮದಲ್ಲಿ ನಡೆಯುತ್ತಿದ್ದ ಧ್ವಜವಂದನೆ ಹಾಗೂ ಅದರಲ್ಲಿ ಸ್ತ್ರೀಯರ ಪಾತ್ರ ಗಣನೀಯವಾದುದು. ಆ ಸಮಯದಲ್ಲಿ ಪೊಲೀಸರ ದಬ್ಬಾಳಿಕೆ, ನೂರಾರು ಜನರ ದಸ್ತಗಿರಿ ಇವೆಲ್ಲ ಆದುವು. ಆದರೆ ನಾನು ಭೂಗತ ಚಟುವಟಿಕೆಯಲ್ಲಿ ತೊಡಗಿದ್ದುದರಿಂದ ಪ್ರತ್ಯಕ್ಷವಾಗಿ ಮೆರವಣಿಗೆಯಲ್ಲಿ ಭಾಗವಹಿಸುತ್ತಿರಲಿಲ್ಲ. ಆದರೂ ತಕ್ಕಮಟ್ಟಿಗೆ ಇವೆಲ್ಲದರ ವ್ಯವಸ್ಥೆ ಮಾಡುತ್ತಿದ್ದೆ.

ಸಿದ್ದಾಪುರ ತಾಲ್ಲೂಕಿನಲ್ಲಿ ಸುಮಾರು ಐನೂರು ಜನ ಖಾತೆದಾರರು ಕರ ಕೊಡಲು ನಿರಾಕರಿಸಿದ್ದರು. ಮತ್ತು ಒಂದು ಸಾವಿರ ಒಕ್ಕಲುಜನ ಸತ್ಯಾಗ್ರಹದಲ್ಲಿ ಸೇರಿದ್ದರು. ಹೀಗೆ ಎಷ್ಟೋ ಮನೆಗಳಲ್ಲಿ ಹೆಂಗಸರು, ಗಂಡಸರೆಲ್ಲ ಚಳುವಳಿಯಲ್ಲಿ ಪಾಲುಗೊಂಡಿದ್ದರಿಂದ ಅವರೆಲ್ಲ ಸೆರೆಮನೆ ಸೇರಬೇಕಾಯಿತು. ಅದರಿಂದಾಗಿ ದುಡಿಯುವ ಜನರಿಲ್ಲದೆ ಮನೆಯಲ್ಲಿದ್ದವರ ಜೀವನ ನಡೆಯುವುದು ದುಸ್ತರವಾಯಿತು. ಇಂತಹ ಪ್ರಕ್ಷುಬ್ಧ ಸ್ಥಿತಿಯಲ್ಲಿದ್ದವರಿಗೆ ಆದಷ್ಟು ನೆರವಾಗಬೇಕೆಂದು ಅಕ್ಕಿ ಹಂಚುವ ವ್ಯವಸ್ಥೆ ಮಾಡಿದ್ದರು. ಆ ಕೆಲಸದಲ್ಲಿ ನಾನು ಮುಖ್ಯವಾಗಿ ಪಾಲುಗೊಂಡಿದ್ದೆ.

ಇದಲ್ಲದೆ ಸತ್ಯಾಗ್ರಹಿಗಳ ಆಸ್ತಿಪಾಸ್ತಿಗಳನ್ನು ಜಪ್ತಿ ಮಾಡಿ ಸರ್ಕಾರ ವಶಪಡಿಸಿಕೊಂಡು ಹರಾಜುಹಾಕುತ್ತಿತ್ತು. ಸತ್ಯಾಗ್ರಹಿಗಳ ಮಾಲನ್ನು ಜನರು ಕೊಂಡುಕೊಳ್ಳದಂತೆ ತಡೆಯಲು, ಹಾಗೆ ಯಾರಾದರೂ ಕೊಂಡರೆ ಅವರ ಮನೆ ಮುಂದೆ ಉಪವಾಸ ಸತ್ಯಾಗ್ರಹ ನಡೆಸುವ ಪದ್ಧತಿ ಇತ್ತು. ಈ ಸತ್ಯಾಗ್ರಹದಲ್ಲಿ ವಿಶೇಷವಾಗಿ ಸ್ತ್ರೀಯರು ಪಾಲುಗೊಂಡಿದ್ದರು. ಇದರ ವ್ಯವಸ್ಥೆಯನ್ನು ವೆಂಕಟರಾಮಯ್ಯನವರ ಪತ್ನಿ ಗೌರಮ್ಮ ಯಶಸ್ವಿಯಾಗಿ ನೋಡಿಕೊಳ್ಳುತ್ತಿದ್ದರು. ಹೆಜ್ಜೆ ಸತ್ಯಾಗ್ರಹ, ಅಕ್ಕುಂಜಿ ಸತ್ಯಾಗ್ರಹ, ಮಾವಿನಗುಂಡಿ ಸತ್ಯಾಗ್ರಹಗಳು ಬಹಳ ಯಶಸ್ವಿಯೂ ಆದುವು.

ಮಾಲನ್ನು ಕೊಂಡವರು ಅದನ್ನು ಹಿಂತಿರುಗಿಸಬೇಕೆಂದೂ, ಇನ್ನು ಮುಂದೆ ಸತ್ಯಾಗ್ರಹಿಗಳ ಮಾಲನ್ನು ಕೊಳ್ಳುವುದಿಲ್ಲವೆಂದು ಪ್ರತಿಜ್ಞೆಯನ್ನು ಕೊಂಡ ಜನರಲ್ಲಿ ಮೂಡಿಸಬೇಕೆಂದೂ ಉಪವಾಸದ ಮೂಲಕ ಭಗವಂತನಲ್ಲಿ ನಮ್ಮ ಪ್ರಾರ್ಥನೆ -ಇದೇ ಉಪವಾಸ ಸತ್ಯಾಗ್ರಹದ ಮೂಲ ಉದ್ದೇಶ. ಇಂತಹ ಒಂದು ಸತ್ಯಾಗ್ರಹ ಸಿರಸಿ ತಾಲ್ಲೂಕಿನ ತಿಗಣೆಯಲ್ಲಿ ನಡೆಯಿತು. ತಿಗಣೆಯ ಗದಿಗೆಪ್ಪಗೌಡ ಮೂರು ಎಮ್ಮೆಗಳನ್ನು ಹೀಗೆ ಸತ್ಯಾಗ್ರಹಿಗಳಿಂದ ಕೊಂಡನು. ನಾಗವೇಣಿಬಾಯಿ, ಮಹಾಲಕ್ಷ್ಮಿ ಬೆಳ್ಳೆಗೇರಿ ಎಂಬ ಸತ್ಯಾಗ್ರಹಿಗಳು ಎಮ್ಮೆಗಳನ್ನು ಮರಳಿ ಪಡೆಯಲು ಅನ್ನ ಸತ್ಯಾಗ್ರಹ ಹೂಡಿದರು. ಗೌಡ ಅವರನ್ನು ಒತ್ತಾಯದಿಂದ ಓಡಿಸಲು ಯತ್ನಿಸಿದ. ಸತ್ಯಾಗ್ರಹಿಗಳು ಸ್ಥಳ ಬಿಟ್ಟು ಕದಲಲಿಲ್ಲ. ಅನಂತರ ನಾಗವೇಣಿಬಾಯಿ ಮತ್ತು ಸೀತಾಬಾಯಿ ಗಣೇಶ ಹೆಗಡೆ ಇವರುಗಳು ಬಂದು ಗೌಡನ ಮನೆ ಮುಂದೆ ಸತ್ಯಾಗ್ರಹ ಪ್ರಾರಂಭಿಸಿದರು. ಪೊಲೀಸರು ಇವರನ್ನು ಬಂಧಿಸಿದರು. ಅನಂತರ ಕಮಲಾದೇವಿ ಮತ್ತು ಗಂಗಮ್ಮ ಮುಂದೆ ಬಂದು ಸತ್ಯಾಗ್ರಹವನ್ನು ಮುಂದುವರಿಸಿದರು. ಅವರ ಬಂಧನವೂ ಆಯಿತು. ಗೌಡ ಜಗ್ಗಲಿಲ್ಲ. ಬದಲು ಮನೆಯ ಅಂಗಳವನ್ನು ಅಗೆಯಿಸಿ ಕೊಟ್ಟಿಗೆಯ ಮತ್ತು ಮನೆಯ ಕೊಳೆನೀರು ಅಲ್ಲಿಗೆ ಬಂದು ಕೆಸರಾಗುವಂತೆ ಮಾಡಿದ. ಕೆಸರಿನಲ್ಲಿ ಮುಳ್ಳು, ಗಾಜುಗಳನ್ನು ಬೆರೆಸಿದ. ಹೀಗಿದ್ದ ಸ್ಥಳದಲ್ಲಿಯೇ ವೆಂಕೂಬಾಯಿ ಮತ್ತು ಪರಮೇಶ್ವರಮ್ಮ ತಮ್ಮ ಸತ್ಯಾಗ್ರಹ ಬಿಡದೆ ಮುಂದುವರಿಸುತ್ತಾ ಹೋದರು.

ಸತತ ಮೂರು ದಿನಗಳು ಕಳೆದವು. ರಾತ್ರಿ ವಿಪರೀತ ಮಳೆ ತಡೆಯಲಾರದೆ ಹತ್ತಿರವಿದ್ದ ಮಾರೀಗುಡಿಯಲ್ಲಿ ಆಶ್ರಯ ಪಡೆದರು. ಆಗ ಕೊಳೆಯಪ್ಪನೆಂಬುವನ ಸಂಗಡ ಕೆಲವು ಪುಂಡರು ಬಂದು ಸತ್ಯಾಗ್ರಹಿಗಳನ್ನು ನೆಲಕ್ಕೆ ಕೆಡವಿಕೊಂಡು ಅಪ್ಪಳಿಸಿದರು. ವೆಂಕೂಬಾಯಿಯನ್ನು ಹಿಡಿದು ಬಡಿದರು. ಪರಮೇಶ್ವರಮ್ಮನ ಮಾನ ಕಳೆಯಲು ಪ್ರಯತ್ನಿಸಿದರು. ಆಕೆಯು ತನ್ನ ಮಾನ ರಕ್ಷಣೆಗಾಗಿ ಇಟ್ಟುಕೊಂಡಿದ್ದ ಚೂರಿಯನ್ನು ತೆಗೆದು ತಂತಾನೆ ತಿವಿದುಕೊಳ್ಳಲು ಪ್ರಯತ್ನಿಸಿದಾಗ ಈ ಜಂಜಾಟದಲ್ಲಿ ಪುಂಡರು ಹೆದರಿ ಓಡಿಹೋದರು. ಹರಿತವಾದ ಚೂರಿಯು ತಾಕಿ ಪರಮೇಶ್ವರಮ್ಮನ ತೋಳಿಗೆ ಗಾಯವಾಯಿತು. ಅವರನ್ನು ಬಸೂರಿಗೆ ಕರೆತಂದು ಉಪಚರಿಸಲಾಯಿತು.

ಇಷ್ಟಕ್ಕೇ ಹೆದರಿ ಸತ್ಯಾಗ್ರಹವನ್ನು ನಿಲ್ಲಿಸದೆ ಮುಂದುವರಿಸುವುದು ನಮ್ಮ ತತ್ವ. ಇದಲ್ಲದೆ ಇತರ ಸತ್ಯಾಗ್ರಹಿಗಳೂ ಸ್ವಲ್ಪ ಗಾಬರಿಗೊಂಡಿದ್ದರು. ಅವರಲ್ಲಿ ಧೈರ್ಯ ತುಂಬುವ ಸಲುವಾಗಿ ಮತ್ತು ಕರ್ತವ್ಯ ದೃಷ್ಟಿಯಿಂದ ನಾನೇ ಸ್ವತಃ ಗೌಡರ ಮನೆ ಮುಂದೆ ಸತ್ಯಾಗ್ರಹಕ್ಕೆ ಕೂರಲು ಹೊರಟೆ. ನನ್ನ ಜೊತೆಯಾಗಿ ಕಾವೇರಮ್ಮ ಮತ್ತು ಕಮಲಮ್ಮ ಇವರುಗಳೂ ಬಂದು ಸೇರಿಕೊಂಡರು. ನಮ್ಮ ಸಹಾಯಕ್ಕೆಂದು ಗಣೇಶ ಹೆಗಡೆಯವರೂ ಬಂದಿದ್ದರು.

ಬಸೂರಿನಿಂದ ತಿಗಣೆಗೆ ಹೋಗುವಾಗ ಒಂದು ದೊಡ್ಡ ಹಳ್ಳ ದಾಟಬೇಕಾಗುತ್ತಿತ್ತು. ಹಳ್ಳದಲ್ಲಿ ಪೂರಾ ನೀರು ಹರಿಯುತ್ತಿತ್ತು. ಅಲ್ಲಿರುತ್ತಿದ್ದ ನಾವೆಯವನು ಇರಲಿಲ್ಲ, ನಾವೆ ಮಾತ್ರ ಇತ್ತು, ಹುಟ್ಟೂ ಇರಲಿಲ್ಲ. ಯಾರಿಗಾಗಿಯೂ, ಯಾವುದಕ್ಕಾಗಿಯೂ ಕಾಯಲು ನಮಗೆ ಸಮಯವೂ ಇಲ್ಲ. ಆಗ ಕೃಷ್ಣಭಟ್ಟರು ತಮ್ಮ ಕೈಯನ್ನೇ ಹುಟ್ಟಾಗಿ ಮಾಡಿಕೊಂಡು ನಮ್ಮನ್ನು ಆಚೆ ದಡಕ್ಕೆ ಮುಟ್ಟಿಸಿದರು.

ಸ್ವಾತಂತ್ರ್ಯ ಹೋರಾಟದಲ್ಲಿ ಸಹಾಯಕರಾಗಿ ನಿಂತಿದ್ದ ಇಂತಹ ಧೈರ್ಯಸ್ಥರನ್ನೂ, ವೀರರನ್ನೂ ನೆನೆಯುವುದೇ ಸುದಿನ.

ಗೌಡರ ಮನೆ ಮುಂದೆ ಸತ್ಯಾಗ್ರಹಕ್ಕೆ ಆ ಕೊಳಚೆಯಲ್ಲಿಯೇ ಕುಳಿತೆವು. ಕಾವೇರಮ್ಮನ ಹಸುಗೂಸು ಕೇವಲ ಒಂದು ವರ್ಷದ್ದು-ತಾಯಿಯ ತೊಡೆಮೇಲೆ ಅದೂ ಸತ್ಯಾಗ್ರಹದಲ್ಲಿ ಪಾಲ್ಗೊಂಡಿತ್ತು. ಇದನ್ನೆಲ್ಲ ಮಾರನೆಯ ದಿವಸ ಗೌಡರ ಹೆಂಡತಿ ಗೌರಮ್ಮ ನೋಡಿ ನೊಂದರು. ಎಮ್ಮೆಯನ್ನು ಮರಳಿಕೊಡಬೇಕೆಂದೂ ಇಲ್ಲವಾದರೆ ಸತ್ಯಾಗ್ರಹದಲ್ಲಿ ತಾವೂ ಸೇರಿಕೊಳ್ಳುವುದಾಗಿ ಬೆದರಿಕೆ ಹಾಕಿದರು. ಹೀಗಾದಾಗ ಗೌಡರು ಮನಸ್ಸಿಲ್ಲದ ಮನಸ್ಸಿನಿಂದ ಕೊಡಲೊಪ್ಪಿ-ದರು. ಸತ್ಯಾಗ್ರಹದ ಮೂರನೆಯ ದಿನ ಸಿರಸಿ, ಸಿದ್ದಾಪುರಗಳಿಗೆ ಇಂಗ್ಲೆಂಡಿನ ಪಾರ್ಲಿಮೆಂಟ್ ಮೆಂಬರಾದ ಮ್ಯಾಟರ್ಸ್‌ರವರು ಬರುವರೆಂದು ಸುದ್ದಿಬಂದಿತು. ಅವರು ಬರುವ ವೇಳೆಗೆ ಎಲ್ಲೂ ಸತ್ಯಾಗ್ರಹವಿರಬಾರದೆಂದು ನಮ್ಮನ್ನು ಪೊಲೀಸರು ದಸ್ತಗಿರಿಮಾಡಿ ಸಿರಸಿ ಲಾಕಪ್ಪಿನಲ್ಲಿಟ್ಟಿದ್ದರು. ಮ್ಯಾಟರ್ಸ್‌ರವರು ಬಂದ ಸಮಯ ಸಿರಸಿ, ಸಿದ್ದಾಪುರಗಳಲ್ಲಿ ಅವ್ಯಾಹತವಾಗಿ ಚಳುವಳಿ ನಡೆಸಬೇಕೆಂದು ಕಾಂಗ್ರೆಸ್ ಸಂಸ್ಥೆ ತೀರ್ಮಾನಿಸಿ ಹಿಂದಿನ ದಿನದಿಂದಲೇ ಕಾರ್ಯಾಚರಣೆ ಆರಂಭವಾಗಿತ್ತು. ಜಂಗಲ್ ಸತ್ಯಾಗ್ರಹ, ಪ್ರಭಾತ ಫೇರಿ, ಮೆರವಣಿಗೆ ಇತ್ಯಾದಿಗಳು ನಾನಾದಿಕ್ಕುಗಳಿಂದ ಸಿರಸಿ, ಸಿದ್ದಾಪುರಕ್ಕೆ ಪ್ರವಾಹದಂತೆ ಬಂದು ಸೇರುತ್ತಿದ್ದುವು. ಇದನ್ನು ತಡೆಯುವ ಸಲುವಾಗಿ ಪೊಲೀಸರು ಒಂದು ಹತ್ಯಾಕಾಂಡವನ್ನೇ ನಡೆಸಿದರು. ಮ್ಯಾಟರ್ಸ್‌ರವರು ಬಂದಾಗ ಜನ ಅವರಲ್ಲಿ ಈ ವಿಷಯವನ್ನು ನಿವೇದಿಸಿದರು. ಹೊಡೆದ ಗಾಯ-ಗಳನ್ನೂ, ಛಡಿ ಏಟಿನ ಬಾಸುಂಡೆಗಳನ್ನೂ ಜನರು ತೋರಿಸಿದ್ದಲ್ಲದೆ, ಹೊಟ್ಟೆಗೆ ಇಲ್ಲದಿದ್ದ ಜನರಿಗೆ ಕೊಡುತ್ತಿದ್ದ ಸೇರು, ಎರಡು ಸೇರು ಅಕ್ಕಿಯನ್ನೂ ಜಪ್ತಿಮಾಡಿ ವಶಪಡಿಸಿಕೊಂಡಿರುವ ಅಂಶವನ್ನು ಅವರ ಗಮನಕ್ಕೆ ತಂದರು. ಸಿರಸಿ ಲಾಕಪ್ಪಿನಲ್ಲಿದ್ದ ನಮ್ಮಗಳನ್ನೂ ಸಹ ಬಂದು ಭೇಟಿಯಾದರು. ಅವರ ಜೊತೆಯಲ್ಲಿ ಬೆಂಗಳೂರಿನ ಅಡ್ವೊಕೇಟರಾದ ಎಸ್. ವೆಂಕಟಪತಯ್ಯನವರೂ ಬಂದಿದ್ದರು. ಸತ್ಯಾಗ್ರಹದ ವಿಶೇಷ ಸಂಗತಿಗಳನ್ನು ನಮ್ಮಿಂದ ತಿಳಿದುಕೊಂಡು ವೆಂಕಟಪತಯ್ಯನವರು ಅವರಿಗೆ ಇಂಗ್ಲೀಷಿನಲ್ಲಿ ತರ್ಜುಮೆಮಾಡಿ ತಿಳಿಸಿದರು. ಲಾಕಪ್ಪಿನಲ್ಲಿನ ಕಾವೇರಮ್ಮನ ಒಂದು ವರ್ಷದ ಹಸುಗೂಸನ್ನು ಕಂಡು ಅವರ ಕಣ್ಣಿನಲ್ಲಿ ನೀರಾಡಿತು.

ಈ ಚಳುವಳಿಯ ಕಾಲದಲ್ಲಿ ಪೊಲೀಸರ ಕಾಟದಿಂದ ನಾನು ತಪ್ಪಿಸಿಕೊಳ್ಳಬೇಕಾಗಿತ್ತು. ನನಗೆ ಒಂದೇ ಕಡೆ ಇರಲು ಸಾಧ್ಯವಾಗು-ತ್ತಿರಲಿಲ್ಲ. ಕೆಳದಿ, ಕಂಕನಹಳ್ಳಿ, ಮುಂಡಗೇಸರ, ಹೊಸಬಾಳೆ, ಬಸೂರು ಮೊದಲಾದ ಕಡೆಗಳಲ್ಲಿ ನಮ್ಮ ಕ್ಯಾಂಪ್ ಇರುತ್ತಿತ್ತು. ಆ ಸಮಯದಲ್ಲೆಲ್ಲ ನಮಗೆ ಆ ಊರಿನ ಜನ ಬಹಳ ವಿಶೇಷರೀತಿಯಿಂದ ಸಹಾಯ ಮಾಡುತ್ತಿದ್ದರು. ಕೆಳದಿ ಲಕ್ಷ್ಮಮ್ಮ, ಹಾರೆಕೊಪ್ಪದ ರಾಮಭಟ್ಟ, ಹೊಸಬಾಳೆ ಗೌರಮ್ಮ, ಕಾವೇರಮ್ಮ ಇವರೆಲ್ಲ ಆಗ ನಮ್ಮೊಡನಿದ್ದರು. ಕೊಡಗಿನ ಮಾರ್ತಾಂಡರು ನಮ್ಮ ಮೇಲ್ವಿಚಾರಕರಾಗಿದ್ದರು. ಅಡುಗೆ ಮಾಡುವುದರಿಂದ ಹಿಡಿದು, ಕಸಗುಡಿಸುವವರೆಗೆ ಎಲ್ಲ ಕೆಲಸಗಳನ್ನೂ ನಾವೇ ಮಾಡಿಕೊಳ್ಳುತ್ತಿದ್ದೆವು. ಇಲ್ಲಿ ನಾವು ಸುಮಾರು ಒಂದೂವರೆ ವರ್ಷಕಾಲ ಇದ್ದು ಅನಂತರ ವಿಸಾಪುರ ಜೈಲಿನಿಂದ ಬಿಡುಗಡೆ ಆಗಿ ಬಂದಿದ್ದ ನಮ್ಮ ಯಜಮಾನರ ಜೊತೆಯಲ್ಲಿ ಮೈಸೂರಿಗೆ ಮರಳಿದೆ.

ಜೈಲಿಗೆ ಹೋಗಿ ಬಂದವರಾದ್ದರಿಂದ ನಮ್ಮ ವಿಷಯವಾಗಿ ನಮ್ಮ ಬಂಧುಗಳಲ್ಲಿ ಅಸಮಾಧಾನ ಉಂಟಾಗಿತ್ತು. ನಮ್ಮ ಮೇಲೆ ಒಂದು ರೀತಿಯ ಬಹಿಷ್ಕಾರ. ನಮ್ಮ ಅತ್ತೆಮಾವಂದಿರು ವೈದಿಕ ಮನೆತನಸ್ಥರು. ನಾನು ಅವರಲ್ಲಿಗೆ ಹೋಗಿಬರುವುದು ಅವರಿಗಿಷ್ಟವಿರಲಿಲ್ಲ. ನಮ್ಮ ತಂದೆ ಸರ್ಕಾರಿ ನೌಕರಿಯಲ್ಲಿದ್ದುದರಿಂದ ಕಾಂಗ್ರೆಸ್ಸಿನವಳಾದ ನನ್ನ ಸಹವಾಸದಿಂದ ತಮ್ಮ ನೌಕರಿ ಹೋಗುವುದೆಂಬ ಹೆದರಿಕೆ. ಅವರಿಗೂ ನಾನು ಬೇಡವಾದೆ. ಹೀಗೆ ಕೆಲವು ವರ್ಷಗಳನ್ನು ಕಳೆಯಬೇಕಾಯಿತು.

ಬ್ರಿಟಿಷ್ ಇಂಡಿಯಾದಲ್ಲಿ ಕಾಂಗ್ರೆಸ್, ಕಾಯಿದೆ ಕೌನ್ಸಿಲ್‌ಗಳಿಗೆ ಪ್ರವೇಶಿಸುವುದೆಂದು ತೀರ್ಮಾನಿಸಿತು. ಗಾಂಧೀಜಿ ಚಳುವಳಿಯನ್ನು ನಿಲ್ಲಿಸಿದರು. ಮೈಸೂರಿನಲ್ಲಿಯೂ ಆ ಗಾಳಿ ಬೀಸಿತು. ಮೈಸೂರಿನ ಪ್ರಜಾಪ್ರತಿನಿಧಿಸಭೆ ಮತ್ತು ನ್ಯಾಯವಿಧಾಯಕಸಭೆಗೆ ಉಮೇದು-ವಾರರನ್ನು ನಿಲ್ಲಿಸುವ ಬಗ್ಗೆ ಹಂಚಿಕೆಯಾಯಿತು. ಇದರ ಬಗ್ಗೆ ಪ್ರಚಾರಗಳು ನಡೆಯುತ್ತಿದ್ದವು. ನಾನೂ, ಉಮಾಬಾಯಿ ಕುಂದಾ-ಪುರ, ಕೃಷ್ಣಾಬಾಯಿ ಮಂಜ್ರೇಕರ್, ಕಮಲಾದೇವಿ, ತಾಯಮ್ಮ ವೀರಣ್ಣಗೌಡ ಮೊದಲಾದವರೊಡನೆ ಪ್ರಚಾರಕಾರ್ಯದಲ್ಲಿ ಪಾಲ್ಗೊಂಡಿದ್ದೆ. ಹೋದಸ್ಥಳದಲ್ಲೆಲ್ಲ ನಮಗೆ ವೈಭವದ ಸ್ವಾಗತ ದೊರಕುತ್ತಿತ್ತು. ಅದರಲ್ಲಿಯೂ ಕೃಷ್ಣರಾಜನಗರ, ಹುಣಸೂರು, ನಾಗಮಂಗಲ ತಾಲ್ಲೂಕುಗಳಲ್ಲಿ ಸಂಭ್ರಮ ವಿಶೇಷ ರೀತಿಯ-ದಾಗಿರುತ್ತಿತ್ತು. ಆದರೂ ಒಂದೊಂದು ಕಡೆ ಕಹಿ ಪ್ರಸಂಗಗಳು ನಡೆದಿದ್ದೂ ಉಂಟು. ಯಳಂದೂರು ತಾಲ್ಲೂಕಿನಲ್ಲಿ ಸಂತೆಮಳಲಿ-ಯಲ್ಲಿ ಭಾಷಣಮಾಡಲು ನಿಂತಾಗ ಕಲ್ಲುಗಳು ತೂರಿಬರುತ್ತಿದ್ದುವು. ಪೆಟ್ಟಿನಿಂದ ನಾಲ್ಕಾರು ತೊಟ್ಟು ರಕ್ತಗಳು ಬಳ್ಳಾರಿ ಸಿದ್ದಮ್ಮನ ತಲೆಯಿಂದ ಬಿದ್ದವು. ಆದರೂ ರಕ್ತ ಸುರಿಯುತ್ತಿದ್ದರೂ ಅಂಜದೆ, ಅಳುಕದೆ ಭಾಷಣ ಮಾಡುತ್ತಿದ್ದ ಸಿದ್ದಮ್ಮನ ಕಡೆಗೆ ಜನ ಒಲಿದರು. ಈ ದುಷ್ಟ ಕಾರ್ಯಮಾಡಿದವನ ಮೇಲೆ ಮುನಿದರು. ಹೀಗೆ ಕಾಂಗ್ರೆಸ್ಸಿನ ಕಾರ್ಯಚಟುವಟಿಕೆಗಳಲ್ಲಿ ನನ್ನ ಪಾತ್ರ ನಡೆಯುತ್ತಿತ್ತು.

ಮುಂದೆ ಶಿವಪುರದಲ್ಲಿ ಮೈಸೂರು ಕಾಂಗ್ರೆಸ್ ಅಧಿವೇಶನ ನಡೆದು ಮೈಸೂರು ಕಾಂಗ್ರೆಸ್ ಸಂಸ್ಥೆ ಅಸ್ತಿತ್ವಕ್ಕೆ ಬಂತು. ಇದಕ್ಕೆ ಕೆಲವು ತಿಂಗಳ ಹಿಂದೆ ಅಂದರೆ 26-1-1938ರಂದು ಮೈಸೂರಿನ ಸುಬ್ಬರಾಯನಕೆರೆಯಲ್ಲಿ ಪ್ರತಿಬಂಧಕಾಜ್ಞೆಯನ್ನು ಉಲ್ಲಂಘಿಸಿ

ಧ್ವಜಾರೋಹಣ ಮಾಡಿದೆ. ನನಗೆ ಈ ಕಾರ್ಯದಲ್ಲಿ ನೆರವಾದವರು ತಗಡೂರು ಆಶ್ರಮದ ರಂಗಯ್ಯ ಎಂಬ ಸ್ವಯಂಸೇವಕರು. ನನ್ನನ್ನೂ, ನನ್ನ ಜೊತೆಯಲ್ಲಿದ್ದ ಒಂದೂವರೆ ವರ್ಷದ ನನ್ನ ಮಗು ಜಯಸಿಂಹನನ್ನೂ ಮತ್ತು ತಗಡೂರಿನ ರಂಗಯ್ಯನನ್ನೂ ಪೊಲೀಸರು ಬಂಧಿಸಿ ಜೈಲಿಗೆ ಕರೆದೊಯ್ದರು. ಅಲ್ಲಿ ಜೈಲಿಗೆ ಹೋದಮೇಲೆ ಮೈಸೂರು ಪ್ರಾಂತ್ಯದಲ್ಲಿ ರಾಜಕೀಯ ಬಂದಿಯಾಗಿ ಜೈಲು ಸೇರಿರುವ ಮಹಿಳೆ ನೀನೊಬ್ಬಳೇ ಎಂದು ಅಲ್ಲಿನ ಅಧಿಕಾರಿಗಳು ಹೇಳುತ್ತಿದ್ದರು.

ಜೈಲಿನಿಂದ ಬಿಡುಗಡೆಯಾಯಿತು. ಶಿವಪುರ ಮಹಾಧಿವೇಶನದ ಏರ್ಪಾಡುಗಳು, ಅದರ ಬಗ್ಗೆ ಪ್ರಚಾರಕಾರ್ಯದಲ್ಲಿ ನಾನು ಮೈಸೂರು ಮತ್ತು ಮಂಡ್ಯ ಜಿಲ್ಲೆಗಳಲ್ಲಿ ಸಂಚರಿಸಿ ಪ್ರಚಾರಭಾಷಣ ಮಾಡಿದೆ. ಮಿರ್ಲೆ, ಸಾಲಿಗ್ರಾಮ, ಕೆ.ಆರ್.ನಗರ, ಹುಣಸೂರು, ಹೊಸ ಅಗ್ರಹಾರ, ಗುಂಡ್ಲುಪೇಟೆ, ನಂಜನಗೂಡು, ಮೊದಲಾದ ಸ್ಥಳಗಳಲ್ಲಿ ಇದಕ್ಕಾಗಿ ಸಂಚರಿಸಿ ಭಾಷಣಮಾಡಿದೆನೆಂದು ನನ್ನ ಜ್ಞಾಪಕ.

ಶಿವಪುರ ಅಧಿವೇಶನದಲ್ಲಿದ್ದ ಸ್ವಯಂಸೇವಕಿಯಾಗಿ ಕೆಲಸ ಮಾಡಿದೆ. ಅನಂತರ ಮೈಸೂರಿನ ಟೌನ್‌ಹಾಲ್ ಮೈದಾನದಲ್ಲಿ ಪ್ರತಿಬಂಧಕಾಜ್ಞೆ ಕಾಯಿದೆ ಮುರಿದು ಜೈಲು ಸೇರಿದೆ. ಅಲ್ಲಿಂದ ಬಿಡುಗಡೆಯಾಗಿ ಬಂದಮೇಲೆ ಮತ್ತೆ ನನ್ನ ಕಾರ್ಯದಲ್ಲಿ ತೊಡಗಿದೆ. 1940ರಿಂದ ಮೈಸೂರು ಕಾಂಗ್ರೆಸ್ಸಿನವರು ಚುನಾವಣಾ ರಂಗಕ್ಕಿಳಿಯುವ ಸನ್ನಾಹದಲ್ಲಿದ್ದರು. 1940ರಿಂದ ಮೈಸೂರು ಕಾಂಗ್ರೆಸ್ಸಿನವರು ಚುನಾವಣಾ ರಂಗಕ್ಕಿಳಿಯುವ ಸನ್ನಾಹದಲ್ಲಿದ್ದರು. 1942ರ ಚಳುವಳಿ ಬಂದಿತು. ದೇಹಾಲಸ್ಯದಿಂದ ಆ ಚಳುವಳಿಯಲ್ಲಿ ನೇರ ಪಾತ್ರ ವಹಿಸಲಾಗಲಿಲ್ಲ. ಆದರೂ ಪರೋಕ್ಷ ರೀತಿಯಲ್ಲಿ ನನ್ನ ಕಾರ್ಯವನ್ನು ಸ್ವಲ್ಪಮಟ್ಟಿಗೆ ಮಾಡಿದೆ.

ಅಲ್ಲಿಂದ ಮುಂದೆ ಮೈಸೂರು ಕಾಂಗ್ರೆಸ್ಸಿನವರು ಕಾಯಿದೆ ಕೌನ್ಸಿಲ್ಲನ್ನು ಪ್ರವೇಶಿಸಿದರು. ಕಾಂಗ್ರೆಸ್ಸಿನ ಪ್ರಚಾರ ಕಾರ್ಯಕ್ಕೆ ಸರ್ಕಾರದವರು ಪ್ರತಿಬಂಧಕಾಜ್ಞೆಗಳ ಮೂಲಕ ಅಡ್ಡಿಮಾಡಿದ್ದರು. ನಾನು ಅನೇಕ ಮಹಿಳಾ ಸದನಗಳು, ಮಹಿಳಾ ಸಮಾಜಗಳು ಮುಂತಾದ ಕಡೆ ಹೋಗಿ ಪ್ರಚಾರಕಾರ್ಯ ನಡೆಸಿದೆ. ಹಲವಾರು ಕೇರಿಗಳಿಗೆ ಹೋಗಿ ಯಾರಾದರೊಬ್ಬರ ಮನೆಯಲ್ಲಿ ಕೇರಿಯ ಜನಗಳನ್ನು ಸೇರಿಸಿ ಭಾಷಣಮಾಡಿ ಅವರಲ್ಲಿ ಅರಿವು ಮೂಡಿಸುತ್ತಿದ್ದೆ. ಹೀಗೆ ಮುಸ್ಲಿಂ ಬಾಂಧವರ ಕೇರಿಯೊಂದರಲ್ಲಿಯೂ ಸಭೆ ನಡೆಸಿ, ಕಾಂಗ್ರೆಸ್ಸಿನ ವಿರೋಧಿಗಳಾಗಿದ್ದ ಅಲ್ಲಿನ ಜನರ ಮನಸ್ಸನ್ನು ಗೆದ್ದು, ಮುಸ್ಲಿಂ ಮಹಿಳೆಯರ ಹೆಚ್ಚಿನ ಓಟುಗಳೆಲ್ಲ ಆ ಕೇರಿಯಲ್ಲಿ ಕಾಂಗ್ರೆಸ್ಸಿನ ಪರವಾಗಿ ಬೀಳುವಂತೆ ಮಾಡಿದೆ.

1943ರಲ್ಲಿ ಮೈಸೂರು ಚಳುವಳಿ ಆರಂಭವಾಯಿತು. ಮೈಸೂರಿನ ಎಲ್ಲ ಮುಖಂಡರ ಬಂಧನಗಳಾಯಿತು. ಮೈಸೂರಿನ ಬೀದಿ ಬೀದಿಗಳಲ್ಲಿ ಎಲ್ಲರ ಮನೆಯ ಮೇಲೂ ರಾಷ್ಟ್ರಧ್ವಜದ ಹಾರಾಟ. ಹೆಂಗಸರು, ಹುಡುಗರು, ಮಕ್ಕಳು ಎಲ್ಲರೂ ಚಳುವಳಿಯ ಮಾತನ್ನೇ ಆಡುತ್ತಿದ್ದರು. ನಾನು ಗುಪ್ತವಾಗಿ ಈ ಚಳುವಳಿಗೆ ಸಹಾಯ ಮಾಡುವ ಉದ್ದೇಶದಿಂದ ಪ್ರತ್ಯಕ್ಷವಾಗಿ ಯಾವ ಕಾರ್ಯಕ್ರಮದಲ್ಲೂ ಭಾಗವಹಿಸಲಿಲ್ಲ. ಈ ಚಳುವಳಿಗೆ ಸಂಬಂಧಪಟ್ಟ ಕರಪತ್ರಗಳು ಹಿಂದೂಪುರ, ಹುಬ್ಬಳ್ಳಿಯಲ್ಲಿ ಮತ್ತು ಮದ್ರಾಸಿನಲ್ಲಿ ಅಚ್ಚಾಗಿ ಮಡಕೇರಿಯ ಮುಖಾಂತರ ಮೈಸೂರನ್ನು ತಲುಪುವ ವ್ಯವಸ್ಥೆಯಿತ್ತು. ಈ ಕಾರ್ಯದಲ್ಲಿ ಮೈಸೂರಿನ ಇ.ಪಿ. ಪಾಲಂಜಿಯವರು ನಮಗೆ ನೆರವಾಗಿದ್ದರು. ಪಾಲಂಜಿಯವರು ಮೈಸೂರು ಸರ್ಕಾರದ ಮಡಕೇರಿ ಟೌನ್ ಬಸ್ ಏಜೆನ್ಸಿಯ ಕಂಟ್ರಾಕ್ಟರ್ ಆಗಿದ್ದರು. ಅವರ ಲಾರಿ, ಬಸ್ಸುಗಳು ಮೈಸೂರು ಮಡಕೇರಿಗಳ ನಡುವೆ ಓಡಾಡುತ್ತಿದ್ದವು. ಇವುಗಳ ಮೂಲಕ ನಮ್ಮ ಭಿತ್ತಿಪತ್ರಗಳು ಬರುತ್ತಿದ್ದುವು. ಹೀಗೆ ಅವುಗಳನ್ನು ಪಡೆದು ನನ್ನ ಮೈದುನ ಎಂ.ಎನ್. ಕೃಷ್ಣಮೂರ್ತಿಯ ಮುಖಾಂತರ ಅದರ ಹಂಚಿಕೆಯ ವ್ಯವಸ್ಥೆ ಮಾಡಿದ್ದೆ. ಕೆಲವು ದಿವಸಗಳಲ್ಲಿಯೆ ನನಗೆ ಸಿ.ಐ.ಡಿ.ಗಳ ಕಾಟ ಪ್ರಾರಂಭವಾಯಿತು. ಹೊರಗಡೆ ಇದ್ದು ಕೆಲಸ ಮಾಡಲು ಸಾಧ್ಯವಿಲ್ಲವಾಗಿ ಈ ಕಾರ್ಯಪ್ರಾರಂಭವಾಯಿತು. ಹೊರಗಡೆ ಇದ್ದು ಕೆಲಸ ಮಾಡಲು ಸಾಧ್ಯವಿಲ್ಲವಾಗಿ ಈ ಕಾರ್ಯವನ್ನು ಕೃಷ್ಣಮೂರ್ತಿ ಮತ್ತು ಸಂಗಡಿಗರಿಗೆ ವಹಿಸಿ ಚಳುವಳಿಯಲ್ಲಿ ನೇರವಾಗಿ ಧುಮುಕಲು ನಿಶ್ಚಯಿಸಿದೆ. ಈ ಬಗ್ಗೆ ಜಿಲ್ಲಾ ಮ್ಯಾಜಿಸ್ಟ್ರೇಟರಿಗೆ ಪತ್ರಬರೆದೆ. ಮರುದಿನ ಮನೆಯಲ್ಲಿದ್ದವಳನ್ನು ಬಂಧಿಸಿ ಪೊಲೀಸರು ಕರೆದೊಯ್ದರು.

ಕೆಲವು ದಿನಗಳ ನಂತರ ಕಾಂಗ್ರೆಸ್ಸಿಗೂ, ಸರ್ಕಾರಕ್ಕೂ ಒಪ್ಪಂದವಾಯಿತು. ಎಲ್ಲಾ ರಾಜಕೀಯ ಬಂದಿಗಳ ಬಿಡುಗಡೆಯಾಗಿ ವಿಜಯದಶಮಿಯ ದಿನ ಮೈಸೂರಿನಲ್ಲಿ 'ಪ್ರಜಾ ಮಂತ್ರಿಮಂಡಲ'ದ ಸ್ಥಾಪನೆಯಾಯಿತು. ಈ ರೀತಿಯಾಗಿ ಮೈಸೂರಿನಲ್ಲಿ ನಡೆದ ಚಳುವಳಿಯ ಜಯ ಮೈಸೂರಿನವರಿಗಾಯ್ತು.''

ಮುಂದೆ ಸಂದರ್ಶಕರು ಪ್ರಶ್ನಿಸಿದ್ದರು:

''ನೀವು ನಡೆಸಿದ ಸಭೆಗಳು, ಮೆರವಣಿಗೆ ಈ ಬಗ್ಗೆ ಏನಾದರೂ ಹೇಳುವಿರಾ?''

ಇದಕ್ಕೆ ಅವರಿತ್ತ ಉತ್ತರ :

''ನಾನು 1930 ರಿಂದ 1947ರ ವರೆಗೆ ಭಾಷಣಮಾಡಿರುವ ಸಭೆಗಳ ಅಂಕಿ-ಸಂಖ್ಯೆ ನನಗೆ ಗೊತ್ತಿಲ್ಲ. ಮೆರವಣಿಗೆಗಳ ಬಗ್ಗೆಯೂ ಅಷ್ಟೆ. ಅವನ್ನೆಲ್ಲ ವಿಸ್ತಾರವಾಗಿ ವಿವರಿಸಿ ಹೇಳುವುದು ಅಸಾಧ್ಯ. ಸಾವಿರಾರು ಜನ ಸೇರಿದ ನೂರಾರು ಸಭೆಗಳಲ್ಲಿ ಭಾಷಣಮಾಡಿದ್ದೇನೆ. ಮೆರವಣಿಗೆಗಳಲ್ಲಿ ಪಾಲ್ಗೊಂಡಿದ್ದೇನೆ. ಅವುಗಳ ಪ್ರಕ್ರಿಯೆಯನ್ನು ವಾಚಕರು ತಿಳಿಯುವ ಸಲುವಾಗಿ ಒಂದೆರಡರ ಬಗ್ಗೆ ಮಾತ್ರ ಇಲ್ಲಿ ಹೇಳುತ್ತೇನೆ.

1938ನೇ ಜನವರಿ 26ನೆಯ ತಾರೀಖು, ಮೈಸೂರು ಸುಬ್ಬ-ರಾಯನಕೆರೆ ಮೈದಾನದಲ್ಲಿ ಮಂಜು ಬೆರೆತ ವಾತಾವರಣದಲ್ಲಿ ಎಳೆಬಿಸಿಲಿನ ನರ್ತನ. ಬೆಳಗಿನ ಎಂಟು ಗಂಟೆಯ ಸಮಯಕ್ಕೆ ಸರಿಯಾಗಿ ಸಾವಿರಾರು ಜನರ ನೆರೆದಿದ್ದ ಜನಸಂದಣಿಯ ನಡುವೆ ನನ್ನಿಂದ ಧ್ವಜವಂದನಾ ಕಾರ್ಯಕ್ರಮ ಏರ್ಪಾಡಾಗಿತ್ತು. ನನ್ನ ಪತಿ ಎಂ.ಎನ್. ಜೋಯಿಸರು ಪ್ರತಿವರ್ಷ ಜನವರಿ 26 ರಂದು ಸ್ವಾತಂತ್ರ್ಯದಿನಾಚರಣೆಯನ್ನು ರಾಷ್ಟ್ರೀಯ ಧ್ವಜದಡಿಯಲ್ಲಿ ನಡೆಸಿ-ಕೊಂಡು ಬರುತ್ತಿದ್ದರು. ಆದರೆ ಆ ಜನವರಿಯ ದಿನ ಅವರು ರಾಜದ್ರೋಹದ ಆಪಾದನೆಗಾಗಿ ಜೈಲಿನಲ್ಲಿದ್ದರು. ಆಗ ಇದು ನನ್ನ ಪಾಲಿನ ಕರ್ತವ್ಯವೆಂದು ತಿಳಿದು ನಾನು ಮುಂದಾದೆ.

ಮೈಸೂರಿನಲ್ಲಿ ಧ್ವಜ ಹಾರಿಸಬಾರದೆಂಬ ಕಟ್ಟಾಜ್ಞೆ. ಅದುವರೆಗೆ ಮೈಸೂರಿನಲ್ಲಿ ರಾಜಕೀಯ ಕಾನೂನು ಉಲ್ಲಂಘಿಸಿ ಮುನ್ನಡೆದ ಮಹಿಳೆ ಯಾರೂ ಇರಲಿಲ್ಲ. ನಾನೇ ಮೊದಲಿಗಳು. ಈ ಸ್ವಾರಸ್ಯವನ್ನು ನೋಡಲೆಂದೇ ಸಾವಿರಾರು ಜನದಟ್ಟೈಸಿ ಬಂದಿದ್ದರು. ನಿರ್ಧರಿತ ಸಮಯಕ್ಕೆ ಸರಿಯಾಗಿ ಸ್ವಯಂ ಸೇವಕ ತಗಡೂರು ರಂಗಯ್ಯನವರು ಧ್ವಜಹಾರಿಸಬೇಕೆಂದು ನನಗೆ ಹೇಳಿದರು. ಕಂಕುಳಲ್ಲಿದ್ದ ನನ್ನ ಮಗುವನ್ನು ಪಕ್ಕದಲ್ಲಿದ್ದವರ ಕೈಗೆ ಕೊಟ್ಟು ಹೋಗಿ ನಾನು ಧ್ವಜ-ಹಾರಿಸಿದೆ. ಕೂಡಲೆ ಪೊಲೀಸರು ನನ್ನನ್ನು ಬಂಧಿಸಿದರು. ಮಗುವನ್ನು ಎತ್ತಿಕೊಂಡು ಬರುವುದಾಗಿ ಹೇಳಿದೆ. ಅವರು ಕೇಳಲಿಲ್ಲ, ಅಡ್ಡಿ ಪಡಿಸಿದರು. ಪೊಲೀಸರಿಗೂ, ನೆರೆದಿದ್ದ ಜನಗಳಿಗೂ ತಿಕ್ಕಾಟ ಪ್ರಾರಂಭವಾಯಿತು. ಮಗುವನ್ನು ಎತ್ತಿಕೊಂಡು ಹೋಗಿ ಮ್ಯಾಜಿಸ್ಟ್ರೇಟರ ತೀರ್ಪಿನಂತೆ ನಡೆದು ಕೊಳ್ಳಬೇಕೆಂದು ಒಪ್ಪಂದ-ವಾಯಿತು. ಅಲ್ಲಿ ಮ್ಯಾಜಿಸ್ಟ್ರೇಟರು ಮಗುವು ತಾಯಿಯೊಡನೆ ಹೋಗತಕ್ಕುದೆಂದು ತೀರ್ಪಿತ್ತರು. ಹೊರಗೆ ಕೋರ್ಟಿನ ಮುಂಭಾಗ-ದಲ್ಲಿ ಕಿಕ್ಕಿರಿದ ಜನಸಂದಣಿ. ಅವರ ಜಯಕಾರ, ಜಯಘೋಷಗಳ ಕೂಗು ಮುಗಿಲು ಮುಟ್ಟುತ್ತಿತ್ತು. ಸರ್ಕಾರಕ್ಕೆ ಧಿಕ್ಕಾರದ ಕೂಗು ದಿಕ್ಕುದಿಕ್ಕುಗಳನ್ನು ಒಡೆದುಕೊಂಡು ಹೋಗುತ್ತಿತ್ತು.

ಇಷ್ಟರಲ್ಲಿ ನಾನು ಹಿಂದೆ ತಿಳಿಸಿದ್ದಂತೆ ನಮಗೆ ಬಹಿಷ್ಕಾರ ಹಾಕಿದ್ದ ನಮ್ಮತ್ತೆ ಶ್ರೀಮತಿ ನಂಜಮ್ಮನವರು ಬಂದಿದ್ದು ಎಲ್ಲ ಕಣ್ಣಾರೆ ಕಾಣುತ್ತಿದ್ದವರು ಕಣ್ಣೀರಿಡುತ್ತಿದ್ದರು. ಸಮಾಜದಲ್ಲಿ ಆಗುತ್ತಿದ್ದ ಇತ್ತೀಚಿನ ಬದಲಾವಣೆಗಳು ಅರವತ್ತು ವರ್ಷದ ಮುದುಕಿಯಾದ ತಮಗೆ ಗೊತ್ತಾಗಲಿಲ್ಲವೆಂದು ಅವರು ಪಶ್ಚಾತ್ತಾಪಪಟ್ಟರು. ಆ ಧಿಕ್ಕಾರದ ಸಭೆಯಲ್ಲಿ ಆ ಮುದುಕರೂ ಭಾಷಣಮಾಡಿದರು. ಹೃದಯ ತುಂಬಿ ಆಕೆ ಹೇಳಿದ ನಾಲ್ಕು ಮಾತುಗಳು ಎಲ್ಲರ ಮನಸ್ಸಿಗೂ ತಟ್ಟುವಂತಿತ್ತು. ಸ್ವಾತಂತ್ರ್ಯ ಸಮರದಲ್ಲಿ ಧುಮುಕಿ ತಾಯ್ನಾಡಿನ ಸೇವೆಗೈಯಲು ತನ್ನ ಮಕ್ಕಳನ್ನೆಲ್ಲ ಮುಡಿಪಾಗಿಟ್ಟಿರುವುದಾಗಿ ಸಭೆಯಲ್ಲಿ ಘೋಷಿಸಿದರು. ಅದರಂತೆ ಎಂ.ಎನ್. ಜೋಯಿಸರ ತಮ್ಮಂದಿರಾದ ಎಂ.ಎನ್. ರಾಮಚಂದ್ರಜೋಯಿಸ್, ಎಂ.ಎನ್. ಕೃಷ್ಣಮೂರ್ತಿ, ಎಂ.ಎನ್. ಬಾಲಸುಂದರಮ್ಮ (ಜೋಯಿಸರ ತಂಗಿ) ಇವರೆಲ್ಲ ಕಾಂಗ್ರೆಸ್ಸಿನ ನಿಷ್ಠಾವಂತ ಸೇವಕರಾದರು. ನನ್ನ ಮೇಲಿನ ಬಹಿಷ್ಕಾರವು ಅಂದಿನಿಂದ ತೊಡೆದುಹೋಯಿತು.

ಆ ತರುವಾಯ, ಶಿವಪುರ ಸತ್ಯಾಗ್ರಹದಲ್ಲಿ ಬಂದಿಯಾಗಿದ್ದ-ವರನ್ನೆಲ್ಲ ಸರ್ಕಾರ ಬಿಡುಗಡೆ ಮಾಡಿತು. ಮೈಸೂರಿನಲ್ಲಿ ನನ್ನ ಬಿಡುಗಡೆಯೂ ಆಯಿತು. ಮೈಸೂರಿನ ಜನ ನಮ್ಮನ್ನೆಲ್ಲ ಮೆರವಣಿಗೆಯಲ್ಲಿ ಕರೆದೊಯ್ಯಲೆಂದು ತಯಾರಿ ನಡೆಸಿ ಜೈಲು ಬಾಗಿಲ ಬಳಿ ಕಾದು ನಿಂತಿದ್ದರು. ಜಯಘೋಷ ಕೂಗುತ್ತಾ ಹಾರ ತುರಾಯಿಗಳನ್ನಿತ್ತು ಸ್ವಾಗತಿಸಿದವರು ಹರ್ಷೋದ್ಗಾರದಿಂದ ಅಲ್ಲಿಂದಲೆ ಮೆರವಣಿಗೆ ಹೊರಡಿಸಿದರು. ಜನ ರಸ್ತೆಯುದ್ದಕ್ಕೂ ತಂಡತಂಡವಾಗಿ ಬಂದು ಹಾರಾರ್ಪಣೆ ಮಾಡುತ್ತಿದ್ದರು. ಆರತಿಯನ್ನು ಬೆಳಗುತ್ತಿದ್ದರು. ನನ್ನೊಡನೆ ಜೈಲಿನಲ್ಲಿದ್ದು ಈಗ ನನ್ನೊಡನೆಯೇ ಬಿಡುಗಡೆಯಾಗಿ ಬಂದಿದ್ದ ನನ್ನ ಕಂಕುಳು ಮಗು ಜಯಸಿಂಹನನ್ನು ಸಾವಿರಗಟ್ಟಲೆ ತಾಯಂದಿರು ಎತ್ತಿ ಮುದ್ದಾಡಿ ಹರಸಿದ ದೃಶ್ಯ ಅವರ್ಣನೀಯ.''

-ಉದ್ಧೃತ ಸಂಗ್ರಹ : ಶ್ರೀಮತಿ ಪ್ರೇಮಲತಾ ಸುಂದರೇಶನ್

## ಎಂ.ಎ. ಸೇತುರಾವ್

***ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತಿನ ಅಧ್ಯಕ್ಷ, ಕಾರ್ಯದರ್ಶಿಗಳಾಗಿ ಕೆಲಸ ಮಾಡಿರುವ ಶ್ರೀ ಸೇತುರಾವ್‌ರವರು ಸಾರ್ವಜನಿಕವಾಗಿ ಎಲ್ಲರಿಗೂ ಚಿರಪರಿಚಿತ ಹೆಸರು. ಅದು ವಿಜ್ಞಾನಪರ ಹೋರಾಟವಿರಲಿ, ಸಾಕ್ಷರತೆಯ ಚಳುವಳಿಯಿರಲಿ ಎಲ್ಲೆಲ್ಲೂ ತಮ್ಮನ್ನು ತೊಡಗಿಸಿಕೊಂಡು, ವೃತ್ತಿಯಿಂದ ಉತ್ತಮ ಶಿಕ್ಷಕರಾದ ಸೇತುರಾವ್‌ರವರ ಹೋರಾಟದ ಕಾವು ಸ್ವಾತಂತ್ರ್ಯದ ಹೋರಾಟದ ಕಾಲದಲ್ಲೇ ಮೂಡಿಬಂದದ್ದು. ಮನೆಯಲ್ಲಿ ಅಣ್ಣಂದಿರಿಬ್ಬರೊಂದಿಗೆ ಸೇತುರಾವ್ ಕೂಡ ಗಾಂಧಿಯ ಕರೆ ಕೇಳಿ ಶಾಲೆ ಬಿಟ್ಟವರು; ಜೈಲುವಾಸ ಅನುಭವಿಸಿದವರು. ಹೋರಾಟದಲ್ಲಿದ್ದ ಮಹಿಳೆಯನ್ನೇ ಬಾಳಸಂಗಾತಿಯಾಗಿ ಆರಿಸಿಕೊಂಡವರು ಸೇತುರಾವ್. ದಿ॥ ಶ್ರೀಮತಿ ಕುಂತಳಾಸೇತುರಾವ್ ವಿದ್ಯಾರ್ಥಿನಿಯಾಗಿದ್ದಾಗಲೇ ಚಳುವಳಿಯಲ್ಲಿದ್ದವರು ಮತ್ತು ಸ್ವಾತಂತ್ರ್ಯಾನಂತರವೂ ಸಾರ್ವಜನಿಕ ಚಟುವಟಿಕೆಗಳಲ್ಲಿ ಭಾಗವಹಿಸಿದವರು. ಸ್ವಾತಂತ್ರ್ಯಕಾಲದ ಮಹಿಳೆಯರ ಭಾಗವಹಿಸುವಿಕೆಯ ಸ್ವರೂಪವನ್ನು ಕುರಿತಂತೆ 'ಅಚಲ' ಇತ್ತೀಚೆಗೆ ಸೇತುರಾವ್ ಅವರನ್ನು ಸಂದರ್ಶಿಸಿತು.***

***ಅಚಲ- ಸ್ವಾತಂತ್ರ್ಯದ ಹೋರಾಟದಲ್ಲಿ ಎಂಥ ಮಹಿಳೆಯರು ಭಾಗವಹಿಸುತ್ತಿದ್ದರು ಮತ್ತು ಚಟುವಟಿಕೆಯ ಸ್ವರೂಪಗಳು ಹೇಗಿದ್ದವು?***

**ಸೇತುರಾವ್-** ಮೊಟ್ಟಮೊದಲಿಗೆ ಹೇಳಬೇಕೆಂದರೆ ವಿದ್ಯಾರ್ಥಿನಿ-ಯರೇ ಹೆಚ್ಚು. ನಾನು ಕ್ವಿಟ್ ಇಂಡಿಯಾ ಚಳುವಳಿಯ

ಅನುಭವದಿಂದ ಮತ್ತು ಬೆಂಗಳೂರಿನ ಪ್ರಾಂತ್ಯದಲ್ಲಿ ಇರುವ ಚಳುವಳಿಯ ಅನುಭವದಿಂದ ಹೇಳುತ್ತೀನಿ. ಮಹಾರಾಜ ಮಿಲ್ಸ್ ಮತ್ತು ಮಿನರ್ವ ಮಿಲ್ಸ್‌ನ ಕಾರ್ಮಿಕ ಮಹಿಳೆಯರೂ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗಿಯಾಗಿರುತ್ತಿದ್ದರು. ಸರ್ಕಾರದ ವಿರುದ್ಧ ಪ್ರದರ್ಶನಗಳನ್ನು ಏರ್ಪಡಿಸುವುದು, ಪ್ರಾರ್ಥನಾ ಸಭೆಗಳನ್ನು ಕರೆಯುವುದು, ಚಳುವಳಿಗೆ ಸಂಬಂಧಪಟ್ಟ ಕರಪತ್ರಗಳನ್ನು ಹಂಚು-ವುದು, Vegetable Oil Factory ಯ ಮುಂದೆ ನಿಂತು ಪಾನ ನಿರೋಧದ ಘೋಷಣೆಗಳನ್ನು ಕೂಗುವುದು, ಮಡಕೆ ಒಡೆಯು-ವುದು, ಪಿಕೆಟಿಂಗ್ ಮಾಡುವುದು ಮುಂತಾದವನ್ನು ಮಾಡುತ್ತಿದ್ದರು. ಹೆಣ್ಣುಮಕ್ಕಳು ಹೆಚ್ಚಾಗಿ ರಚನಾತ್ಮಕ ಕಾರ್ಯಗಳಲ್ಲಿ ತೊಡಗಿರು-ತ್ತಿದ್ದರು. ವಿಶೇಷವಾಗಿ ಕಾರ್ಮಿಕ ಮಹಿಳೆಯರು ಪ್ರಾರ್ಥನಾ ಸಭೆಗಳನ್ನು ಏರ್ಪಡಿಸುವರು. ಪ್ರಾರ್ಥನಾ ಸಭೆಗಳೆಂದರೆ ಭಜನೆ ಮಂಡಳಿಯಲ್ಲ, ಅಲ್ಲೂ ಜನಗಳನ್ನು ಸೇರಿಸಿ ಮಹಾತ್ಮಗಾಂಧೀ ಕೀ ಜೈ ಎನ್ನುವುದು, ಸರ್ಕಾರದ ವಿರುದ್ಧದ ಕಾರ್ಯಕ್ರಮಗಳನ್ನು ಚರ್ಚಿಸು-ವುದೂ ಇತ್ತು. ಇನ್ನು ವಿದೇಶೀ ಬಟ್ಟೆ ಸುಡುವ ಕಾರ್ಯಕ್ರಮದಲ್ಲೂ ಹೆಣ್ಣುಮಕ್ಕಳು ಭಾಗವಹಿಸಿದ್ದನ್ನು ನಾನು ಮಲ್ಲೇಶ್ವರ, ಚಿಕ್ಕಲಾಲ್-ಬಾಗ್‌ನಲ್ಲಿ ನೋಡಿದ್ದೇನೆ. KGFನಲ್ಲಿ ಕಾರ್ಮಿಕ ಮಹಿಳೆಯರು ಜೈಲಿಗೆ ಬಹಳ ಮಂದಿ ಹೋಗಿದ್ದರು. ಆಗ ಕೋರ್ಟು ಪಿಕೆಟಿಂಗ್ ಮಾಡುತ್ತಿದ್ದದ್ದು ವಿದ್ಯಾರ್ಥಿನಿಯರು. ಗಂಡಸರುಗಳು ಜೈಲಿನಲ್ಲಿದ್ದಾಗ ಅವರ ಕುಟುಂಬಗಳ ಯೋಗಕ್ಷೇಮ ಮುಂತಾದವನ್ನು ನೋಡಿ-ಕೊಳ್ಳುವ ಕೆಲಸ ಹೆಂಗಸರದಾಗಿತ್ತು. ಸಾಮಾನ್ಯವಾಗಿ ಮಧ್ಯಮವರ್ಗದ ಮಹಿಳೆಯರು ನೇರವಾಗಿ ಭಾಗವಹಿಸದಿದ್ದರೂ ಬೆಂಬಲ ಪ್ರೋತ್ಸಾಹ ಕೊಡುತ್ತಿದ್ದರು. ಕಾಮಾಕ್ಷಮ್ಮ, ಗೌರಮ್ಮ, ಯಶೋಧರಾ ದಾಸಪ್ಪ ಮುಂತಾದವರು ಕಡಿಮೆ ಸಂಖ್ಯೆಯಲ್ಲಿ ದೊರಕುತ್ತಾರೆ, ಅಷ್ಟೆ.

**ಅಚಲ- ಮಹಿಳೆಯರ ವಿಷಯಗಳಿಗೆ ಆದ್ಯತೆ ಕೊಡದೆ, ಮಹಿಳೆಯರನ್ನು ಸ್ವಾತಂತ್ರ್ಯದ ಹೋರಾಟದ ಸಂದರ್ಭದಲ್ಲಿ ಸಾಧನಗಳನ್ನಾಗಿ ಬಳಸಿಕೊಂಡರು ಎಂಬ ಆರೋಪವಿದೆ? ನೀವೇನು ಹೇಳುತ್ತೀರಾ?**

**ಸೇತುರಾವ್-** ಈ ಆರೋಪ ಸರಿಯಿಲ್ಲ. ನನಗೆ ಪರಿಚಯವಿರುವ ಚಳುವಳಿಯಲ್ಲಿ ಭಾಗವಹಿಸಿದ ಮಹಿಳೆಯರೆಲ್ಲಾ ಸ್ವಯಂಪ್ರೇರಣೆ-ಯಿಂದಲೇ ಚಳುವಳಿಯಲ್ಲಿ ಭಾಗವಹಿಸಿದವರು. ಆದ್ದರಿಂದ ಮಹಿಳೆಯರನ್ನು ಬಳಸಿಕೊಂಡರು ಎನ್ನುವುದು ಅಷ್ಟು ಸರಿಹೊಂದು-ವುದಿಲ್ಲ, ಅದು ಅವರಿಗೂ ಅಗೌರವ ತೋರಿಸುವಂತಹದು, ಅಂತ ನನಗೆ ಅನ್ನಿಸುತ್ತೆ.

**ಅಚಲ- ಸ್ವಾತಂತ್ರ್ಯಾನಂತರ ಮಹಿಳೆಯರು ನಿಷ್ಕ್ರಿಯರಾದರೇ?**

**ಸೇತುರಾವ್-** ಮಹಿಳೆಯರೇ ಏಕೆ, ಅದು ನಮಗೂ ಅನ್ವಯಿಸುತ್ತೆ. ನಾನೂ ನಿಷ್ಕ್ರಿಯನಾಗಿರುವೆ. (ನಕ್ಕು) ಅದು ಎಲ್ಲರಿಗೂ ಅನ್ವಯಿಸುವ ಮಾತಲ್ಲ.

**ಅಚಲ- ಗಮನಾರ್ಹ ಎನಿಸುವಂತಹ ಮಹಿಳಾ ನಾಯಕಿಯರನ್ನು ಕುರಿತು ನಿಮ್ಮ ಅನುಭವ ತಿಳಿಸುತ್ತೀರಾ?**

**ಸೇತುರಾವ್-** ಮಂಗಳೂರಿನ ಕಮಲಾದೇವಿ ಚಟ್ಟೋಪಾಧ್ಯಾಯ ಅವರು ಈ ದಿಕ್ಕಿನಲ್ಲಿ ಕೆಲಸ ಮಾಡಿದರು. ಆದರೆ ಅವರು ರಾಷ್ಟ್ರೀಯ ನೆಲೆಯಲ್ಲಿ ಹೆಚ್ಚು ಕಾಣಿಸಿಕೊಂಡರು. ಇನ್ನು ಸುಬ್ಬಮ್ಮ ಜೋಯಿಸ್, ಯಶೋಧರಾ ದಾಸಪ್ಪ, ಮುಂತಾದವರನ್ನು ನೆನೆಪಿಸಿಕೊಳ್ಳಬಹುದು.

**ಅಚಲ- ಸ್ವಾತಂತ್ರ್ಯ ಹೋರಾಟದ ತೀವ್ರತೆಯ ದೃಷ್ಟಿಯಿಂದ ಕರ್ನಾಟಕ ಬೇರೆಯಾಗಿತ್ತಾ?**

**ಸೇತುರಾವ್-** ಇಲ್ಲಿದ್ದದ್ದು ಮೈಸೂರು ರಾಜರ ಸರ್ಕಾರ, ಹೆಚ್ಚಿನ ದಬ್ಬಾಳಿಕೆ ಇಲ್ಲದ್ದರಿಂದ ಬೇರೆ ಪ್ರಾಂತ್ಯಗಳಿಗಿಂತ ಸನ್ನಿವೇಶ ಸ್ವಲ್ಪ ಬದಲಾಗಿತ್ತು. ಆದರೂ ಬ್ರಿಟೀಶರ ದುರಾಡಳಿತ ಪ್ರಭಾವದ ಅಂಶಗಳು ಇಲ್ಲಿನ ಜನರಿಗೂ ಅಸಮಾಧಾನ ಹುಟ್ಟಿಸಿದ್ದವು. ಗಾಂಧಿ ಮತ್ತು ಕಾಂಗ್ರೆಸ್ ಕೂಡ ಮಹಾರಾಜರ ಸರ್ಕಾರದ ಬಗ್ಗೆ ತುಂಬ ಮೆಚ್ಚುಗೆಯ ಅಭಿಪ್ರಾಯವನ್ನೇ ಇಟ್ಟುಕೊಂಡಿದ್ದರು. ಅವರ ವಾದ ನಮಗೆ ಹಿಡಿಸುತ್ತಿರಲಿಲ್ಲ. ನಮಗೆ ಗಾಂಧಿಯವರಿಗಿಂತ ನೆಹರೂ, ಜಯಪ್ರಕಾಶರ ಚಿಂತನೆಗಳೇ ಹೆಚ್ಚು ಪ್ರಿಯವಾಗುತ್ತಿದ್ದವು. ಗಾಂಧಿ-ವಾದದಿಂದ ನಾವು ಪ್ರವರ್ಧಮಾನಕ್ಕೆ ಬರಲ್ಲ ಎನ್ನುವುದು ನಮ್ಮಲ್ಲಿ ಕೆಲವರ ನಂಬುಗೆಯಾಗಿತ್ತು. ಹೋರಾಟದ ಬೇರೆ ವಿಧಾನಗಳೂ ನಮ್ಮನ್ನು ಹೆಚ್ಚು ಆಕರ್ಷಿಸುತ್ತಿದ್ದವು. ನಾವು ಅರಳೆಪೇಟೆಯಲ್ಲಿ ಮೆರವಣಿಗೆ ಹೋಗುವಾಗ INA ಯ 'ಕ್ಯಾಪ್ಟನ್ ಲಕ್ಷ್ಮಿ ಜಿಂದಾಬಾದ್' ಎಂದೆಲ್ಲಾ ಘೋಷಣೆ ಕೂಗಿದ್ದಿದೆ.

**ಅಚಲ- ಇನ್ನು ನಿಮ್ಮ ಮಡದಿಯೂ ಹೋರಾಟದಲ್ಲಿದ್ದವರಲ್ಲಾ, ಅವರ ಹೋರಾಟದ ಬಗ್ಗೆ ನಮ್ಮೊಡನೆ ಹಂಚಿಕೊಳ್ಳುವಿರಾ?**

**ಸೇತುರಾವ್-** ನನ್ನ ಪತ್ನಿಗೆ ಹೋರಾಟದಲ್ಲಿ ಬೆಂಬಲ ನೀಡುವ ಕುಟುಂಬವಿತ್ತು. ನನ್ನ ಪತ್ನಿಯ ತಾಯಿ ಶಾರದಾಂಬ ಶ್ರೀಕಂಠಯ್ಯ ಸಾಮಾಜಿಕ ಕಾರ್ಯಕರ್ತೆ. ಸಂಘ, ಸಂಸ್ಥೆಗಳನ್ನು ಕಟ್ಟಿಕೊಂಡು ಕ್ರಿಯಾಶೀಲವಾಗಿದ್ದ ವ್ಯಕ್ತಿ. ಸಾಹಿತ್ಯಾಸಕ್ತಿ ಇತ್ತು. ಕವನಗಳನ್ನು ಬರೆಯುತ್ತಿದ್ದರು. ಅವರ ವ್ಯಕ್ತಿತ್ವ ನನ್ನ ಹೆಂಡತಿಯ ಮೇಲೆ ಪ್ರಭಾವ ಬೀರಿರಬೇಕು. ಗಾಂಧೀಜಿಯವರು ಇಲ್ಲಿ Reading Room ಗೆ ಬಂದಾಗ ಅವರನ್ನು ನೋಡಲು ಹೋಗಿದ್ದರಂತೆ. ಆಗ ಗಾಂಧಿ ಅವರ ಕೊರಳಲ್ಲಿದ್ದ ಚಿನ್ನದ ಸರಕೊಡು ಎಂದಾಗ ಕೊಡಲು ಹೋದರು. ಹೀಗೆ ಚಿಕ್ಕಂದಿನಲ್ಲೇ ಗಾಂಧೀಜಿ, ದೇಶಭಕ್ತರ ಗೀಳು ಹಚ್ಚಿಕೊಂಡವಳು. ವಿದ್ಯಾರ್ಥಿನಿಯಾಗಿದ್ದಾಗ ವಿದ್ಯಾರ್ಥಿ ಮುಖಂಡತ್ವ ವಹಿಸಿದ್ದು ನಂಜನಗೂಡು ಮತ್ತು ಮೈಸೂರಿನಲ್ಲಿ ನಡೆದ ವಿದ್ಯಾರ್ಥಿ ಅಧಿವೇಶನಗಳಲ್ಲಿ ಭಾಗವಹಿಸಿದ್ದಳು. ಕಾರ್ಮಿಕರು ಜೈಲಿಗೆ ಹೋದಾಗ ಅವರ ಕುಟುಂಬಗಳಿಗೆ ಸಹಾಯ ಮಾಡುವುದು, ಭೂಗತರಾಗಿದ್ದ ನಾಯಕರ ನಡುವೆ ಪತ್ರ ವಿನಿಮಯ ಮಾಡುವುದು, ಊಟ, ವಸತಿ ನೋಡಿ ಕೊಳ್ಳುವುದು ಮುಂತಾದನ್ನು ಮಾಡುತ್ತಿದ್ದಳು.

ಸ್ವಾತಂತ್ರ್ಯಾನಂತರ ಸೇವಾಸಂಘಸಂಸ್ಥೆಗಳ ಚಟುವಟಿಕೆಗಳೊಂದಿಗೆ ತನ್ನನ್ನು ತೊಡಗಿಸಿಕೊಂಡಿದ್ದಳು.

-ಆಶಾ

# ಎಸ್.ಪಿ. ಗೌರಮ್ಮ



'ಮೀಟಿಂಗ್ ಗೌರಮ್ಮ' ಎಂದು ಪ್ರಸಿದ್ಧಿಯಾಗಿರುವ ಶಿಕ್ಷಕಿ ಗೌರಮ್ಮನವರನ್ನು, ಅವರ ಸ್ವಾತಂತ್ರ್ಯಹೋರಾಟದ ಹಿನ್ನೆಲೆಯನ್ನು ತಿಳಿಯುವ ಕುತೂಹಲದಿಂದ ವಿಳಾಸ ಹುಡುಕುತ್ತಾ ಜಯನಗರದ 42ನೇ ಕ್ರಾಸ್‌ನಲ್ಲಿ ಅಡ್ಡಾಡುತ್ತಿದ್ದಾಗ, ಆ ರಸ್ತೆಯಲ್ಲಿದ್ದವರೊಬ್ಬರು 'ಓ ಕಮ್ಯೂನಿಸ್ಟರ ಮನೆಯಾ?' ಎಂದು ಗುರುತು ತೋರಿಸಿದರು. ತೋರಿಸಿದ ಮನೆಯ ಬಾಗಿಲಿನ ಕರೆಗಂಟೆ ಒತ್ತಿ ನಿಂತಾಗ ಕಂಡದ್ದು ತೆಳ್ಳನೆಯ, ಎತ್ತರದ ಆರೋಗ್ಯವಂತ ಕಳೆಯ ವೃದ್ಧೆಯನ್ನು. ನನ್ನ ಪರಿಚಯ ಮಾಡಿಕೊಂಡು ಅವರನ್ನು ಸ್ವಾತಂತ್ರ್ಯೋತ್ಸವದ ಕಾರ್ಯಕ್ರಮಕ್ಕೆ ಆಹ್ವಾನಿಸಲು ಬಂದಿರುವೆನೆಂದು ಹೇಳಿಕೊಂಡಾಗ ಕಡ್ಡಿ ತುಂಡು ಮಾಡಿದಂತೆ, 'ಇಲ್ಲಮ್ಮ, ನಾನು ಬರುವುದಿಲ್ಲ, ಇದರಲ್ಲಿ ನನಗೆ ಆಸಕ್ತಿಯಿಲ್ಲ' ಎಂದು ಹೆಚ್ಚಿನ ಮಾತಿಗೆ ಅವಕಾಶವೇ ಕೊಡದೇ, ವಿಷಯಕ್ಕೆ ತೆರೆ ಎಳೆದರು. ಪೆಚ್ಚಾದ ನನ್ನ ಮುಖ ಕಂಡು, ನಿದಾನವಾಗಿ 'ನೋಡಿ ಸಾರ್ವಜನಿಕವಾಗಿ ಈ ವಿಷಯ ಕುರಿತು ನಾನು ಏನೂ ಮಾತನಾಡುವುದಿಲ್ಲ. ಆದರೆ ನಿಮ್ಮೊಂದಿಗೆ ಇಲ್ಲಿ ಕುಳಿತು ಮಾತನಾಡುವೆ ಎಂದರು. ಸಿಕ್ಕಿದ್ದಷ್ಟೇ ಸಾಕೆಂದು ಖುಷಿಪಟ್ಟ ನನ್ನನ್ನು ಒಳಗೆ ಕರೆದೊಯ್ದರು. ಮಾಡುತ್ತಿದ್ದ ಅಡುಗೆ ಮನೆ ಕೆಲಸ ಮುಗಿಸಿಬಂದರು. ಅವರ ಮೊದಲ ಪರಿಚಯದ ಅನುಭವದಿಂದಲೇ ಅವರನ್ನು ಕೇಳಬೇಕೆಂದಿದ್ದ ಪ್ರಶ್ನೆಗಳೆಲ್ಲಾ ಗಂಟಲಲ್ಲಿ ಉಳಿಯಿತು. ಅವರಿಗೆ ಹೇಳಬೇಕೆನಿಸಿದ್ದನ್ನು ಅವರೇ ಹೇಳಲಿ, ಎಂದು ಸುಮ್ಮನೆ ಕೂತು ಆಲಿಸಿದೆ:

''ಸ್ವಾತಂತ್ರ್ಯ ಬಂದ ಸಮಯದಲ್ಲಿ ಹ್ಯಾರಿಂಗ್‌ಟನ್ ಎನ್ನುವ ಪಾರ್ಲಿಮೆಂಟೇರಿಯನ್ ಒಂದು ಪುಸ್ತಕ ಬರೆದಿದ್ದಾನೆ ಗೊತ್ತಾ..... 'Transfer of Power' ಅಂತ. ಸ್ವಾತಂತ್ರ್ಯ ಬಂದಾಗ ಆದದ್ದು ಇಷ್ಟೆ: ಅದು Indipendence ಅಲ್ಲ, just transfer of power from Lord MountBatton to Jawaharalal Nehru. ಆವತ್ತೂ ನಾನು ಇದೇ ಅಭಿಪ್ರಾಯ ಪಟ್ಟೆ, ಈಗಲೂ ನಾನು ಇದೇ ಅಭಿಪ್ರಾಯ ಇಟ್ಕೊಂಡಿದೀನಿ. ಆದರೆ ನಮ್ಮ ಅಭಿಪ್ರಾಯ ಕೇಳುವವರು ಯಾರು? ನಾವು ಹೋರಾಡಿದ್ದು ಇದಕ್ಕಾಗಿಯೇ ಅಂತ ಅನಿಸಿ ನಮಗೆ ಭ್ರಮನಿರಸನವಾಗಿದೆ. ಅಧಿಕಾರಕ್ಕೆ ಬಂದ ಸ್ವಾತಂತ್ರ್ಯ ಹೋರಾಟಗಾರರು ನಡೆಸಿದ ಆಟಗಳನ್ನು ನೋಡಿದಾಗ ನಾವು ಹಿಂದೆ ಇವರೊಂದಿಗಿದ್ದಿವಿ ಅಂತ ಹೇಳಿಕೊಳ್ಳೊದಿಕ್ಕೆ ಅಸಹ್ಯ ಅನಿಸುತ್ತೆ; ನಾಚಿಕೆ ಆಗುತ್ತೆ. ನನಗೆ ಪ್ರಾಮಾಣಿಕವಾಗಿ ಅನ್ನಿಸುವುದೆಂದರೆ ಈಗ ಅಧಿಕಾರದಲ್ಲಿರುವ ಮುದುಕರೆಲ್ಲಾ ಸುಮ್ಮನೆ ಬಾಯಿಮುಚ್ಚಿಕೊಂಡು ಮನೆಯಲ್ಲಿ ಕೂತುಕೊಳ್ಳಬೇಕು. ಹೊಸ ತಲೆಮಾರು, ತಮ್ಮದೇ ಅನುಭವಗಳಿಂದ ಹೊಸ ಬದುಕನ್ನು ಸೃಷ್ಟಿಸಬೇಕು. ಬೇರೆಯವರ ಅನುಭವದಿಂದ ಯಾರೂ ಬದುಕಲಿಕ್ಕಾಗುವುದಿಲ್ಲ, ಎನ್ನುವುದು ನನ್ನ ಪ್ರಾಮಾಣಿಕ ಅಭಿಪ್ರಾಯ.''

**ಅಚಲ- ನೀವು ಕ್ವಿಟ್ ಇಂಡಿಯಾ ಚಳುವಳಿಯ ಸಂದರ್ಭದಲ್ಲಿ ಎಂತಹ ಕಾರ್ಯಕ್ರಮಗಳಲ್ಲಿ ಭಾಗವಹಿಸಿದ್ದಿರಿ.**

**ಗೌರಮ್ಮ-** ಆಗ ನಾನು ಹದಿನಾರು ವರ್ಷದ ಹುಡುಗಿ, ನನಗೇನು ಅಂತದ್ದು ತಿಳೀತಿರಲಿಲ್ಲ. ಆದರೆ ಗುಪ್ತವಾಗಿ ಹಂಚಬೇಕಿದ್ದ ಕಾಂಗ್ರೆಸ್ಸಿನ ಕರಪತ್ರಗಳನ್ನು ರಾತ್ರಿಯೆಲ್ಲಾ ಕೂತು ಕಲ್ಲಚ್ಚಿನ ಪ್ರತಿಮಾಡಿ ರಾತ್ರಿ ವೇಳೆಯಲ್ಲಿ ಯಾರಿಗೂ ಗೊತ್ತಾಗದಂತೆ ಮನೆಮನೆಗೂ ಹೋಗಿ ಹಾಕಿ ಬರುತ್ತಿದ್ದೆವು. ಇಂತಹುದೇ ಚಿಕ್ಕ ಪುಟ್ಟ ಕೆಲಸಗಳು.

**ಅಚಲ- ನಿಮ್ಮ ಪತಿಯೂ ಚಳುವಳಿಯಲ್ಲಿದ್ದವರಲ್ವಾ.....**

**ಗೌರಮ್ಮ-** ಹೌದು, ಅವರು ಒಟ್ಟು 6 ವರ್ಷಗಳ ಕಾಲ ಜೈಲುವಾಸ ಅನುಭವಿಸಿದ್ದರು. ಅವರು ತರೀಕೆರೆಯ ಧ್ವಜ ಸತ್ಯಾಗ್ರಹದಲ್ಲಿ ಭಾಗವಹಿಸಿದ್ದರು. ರಾಷ್ಟ್ರೀಯ ವಾದಿಯಾಗಿದ್ದರು. ನಂತರ ಕಮ್ಯೂನಿಸ್ಟರಾಗಿದ್ದರು ಮತ್ತು ಕಾರ್ಮಿಕರ ಚಳುವಳಿಯಲ್ಲೂ ಇದ್ದರು. ನಾನೂ ಚಳುವಳಿಯಲ್ಲಿ ಓಡಾಡುತ್ತಿದ್ದ ಕಾರಣ ಅವರ ಭೇಟಿಯಾಯಿತು. ಹಾಗೆಯೇ ಮದುವೆಯಾಯಿತು. ನಮ್ಮ ಮದುವೆಗೆ ನಮ್ಮ ಮನೆಯಲ್ಲಿ ನಮ್ಮ ತಾತನವರಿಂದ ದೊಡ್ಡ ಗಲಾಟೆಯೇ ಆಯಿತು- ಕಾರಣ, ನಾವು ಧಾರ್ಮಿಕ ವಿಧಿಗಳಿಲ್ಲದೆ ಮದುವೆಯಾಗಿದ್ದೆವಲ್ಲಾ, ಅದಕ್ಕೆ.

**ಅಚಲ- ಆಗ ಎಂತಹ ಮಹಿಳೆಯರು ಹೋರಾಟಕ್ಕೆ ಬರುತ್ತಿದ್ದರು?**

**ಗೌರಮ್ಮ-** ಹೋರಾಟಕ್ಕೆ ಬಂದವರಲ್ಲಿ ಬಡವರು, ಕೂಲಿಕಾರರು ಯಾರೂ ನನ್ನ ಗಮನಕ್ಕೆ ಬಂದಿಲ್ಲ. ಮಧ್ಯಮವರ್ಗದವರೂ ಎಲ್ಲೋ ಕೆಲವೇ ನಮ್ಮಂತಹ ನಾಲ್ಕೈದು ಮಂದಿ. ಇನ್ನು ಹೆಚ್ಚಿನ ಮಹಿಳೆಯರು ಶ್ರೀಮಂತ ಕುಟುಂಬದವರೇ ಆಗಿದ್ದರು.

**ಅಚಲ- ನಿಮ್ಮ ವಿದ್ಯಾರ್ಥಿ ಚಳುವಳಿಯಲ್ಲಿನ ಹೋರಾಟಗಳ ಬಗ್ಗೆ ಕೇಳಿರುವೆ. ವಿವರಿಸುತ್ತೀರಾ?**

**ಗೌರಮ್ಮ-** ಅದೂ ನೋಡಿ ನನಗೆ ನಿಜವಾದ ಹೋರಾಟ ಅಂತ ಅನ್ನಿಸುತ್ತೆ. ಬದುಕಿನಲ್ಲಿ ಬರುವ ತತ್‌ಕ್ಷಣದ ಹೋರಾಟಗಳೇ ನನಗೆ ಹೆಚ್ಚು ಮುಖ್ಯವೆನಿಸುತ್ತೆ. ನಾನು ಕಾಲೇಜಲ್ಲಿ ಓದುತ್ತಿದ್ದೆ. ಆಗ

ಯುದ್ಧದ ಸಮಯ. ಸೀಮೆಎಣ್ಣೆ ಸಾಲದು, ಅಕ್ಕಿ ರೇಷನ್ ಬೇಕು-ಮುಂತಾದ ಬೇಡಿಕೆಗಳನ್ನಿಟ್ಟುಕೊಂಡು ಸಹಿಸಂಗ್ರಹ, ಹೋರಾಟ ಮಾಡುತ್ತಿದ್ದಿವಿ. ಆಗ ನಾನು senior Inter ನಲ್ಲಿದ್ದೆ. ಸ್ಟೂಡೆಂಟ್ ಯೂನಿಯನ್‌ನ ಮುಖಂಡಳಾಗಿದ್ದೆ. ಮೈಸೂರು ವಿಶ್ವವಿದ್ಯಾನಿಲಯ-ದಲ್ಲಿ ಸೋಷಿಯಾಲಜಿ ಪ್ರೊಫೆಸರ್ ಆಗಿದ್ದ ಪಾರ್ವತಮ್ಮನವರ ವಿಷಯ ಕೇಳಿದಿರಾ? ಅವರೂ ಕೂಡ ಮೈಸೂರಲ್ಲಿ ಓದುತ್ತಿದ್ದರು. ಮೆಟ್ರಿಕ್ಯುಲೇಷನವರೆಗಿನ ವಿದ್ಯಾರ್ಥಿಗಳಿಗೆ ಉಚಿತ ಸೌಕರ್ಯವಿದ್ದ ಹಾಸ್ಟೆಲ್‌ನಲ್ಲಿ ಅವರಿಗೆ ಅವಕಾಶ ಮಾಡಿಕೊಟ್ಟಿದ್ದರು. ಆ ಹಾಸ್ಟಲ್‌ನಲ್ಲಿ ಬೇಕಾದಷ್ಟು ಅವ್ಯವಹಾರ ನಡೀತಿತ್ತು. ಪಾರ್ವತಮ್ಮನವರದೂ ಮೊದಲಿನಿಂದಲೂ ಹೋರಾಡುವ ಪ್ರವೃತ್ತಿ. ಸದಾ 'ಹೋರಾಟ' ಎಂದು ಓಡಾಡುತ್ತಿದ್ದ ನನಗೆ ಅವರು ಬಂದು 'ಅನ್ಯಾಯದ ವಿರುದ್ಧ ಹೋರಾಟ ಅನ್ನುತ್ತೀಯಲ್ಲ. ಈ ಹಾಸ್ಟೆಲಿನ ಅವ್ಯವಸ್ಥೆ ಸ್ವಲ್ಪ ನೋಡು' ಎಂದು ಸವಾಲೆಸೆದರು. ಕೂಡಲೇ ನಾನು ಕಾರ್ಯಪ್ರವೃತ್ತಳಾದೆ. ಹಾಸ್ಟೆಲ್ಲಿಗೆ ಹೋಗಿ ಅಲ್ಲಿನ ಸ್ಥಿತಿಗತಿ ಅಭ್ಯಾಸ ಮಾಡಿ, ಅಲ್ಲಿನ ಎಲ್ಲ ವಿದ್ಯಾರ್ಥಿನಿಯರ ಸಹಿಯನ್ನು ಗುಪ್ತವಾಗಿ ಸಂಗ್ರಹಿಸಿದೆ. ಒಂದು ಮನವಿ ತಯಾರಿಸಿ ಆಗಿನ ಡಿ.ಡಿ.ಪಿ.ಐ. ನವರಿಗೆ ಸಲ್ಲಿಸಿದೆ. ವಿಷಯ ತಿಳಿದು ಇದರ ಹಿಂದೆ ಪಾರ್ವತಮ್ಮನೇ ಇರಬೇಕೆಂದು ಹಾಸ್ಟೆಲ್ ವಾರ್ಡನ್‌ನ ಕುತಂತ್ರದಿಂದ ಪಾರ್ವತಮ್ಮನನ್ನು ಹಾಸ್ಟೆಲ್‌ನಿಂದ ಹೊರದೂಡಿದರು. ಅಲ್ಲಿಂದ ಬಂದ ಪಾರ್ವತಮ್ಮನನ್ನು ಬ್ರಾಹ್ಮಣರೇ ತುಂಬಿದ ವಠಾರದಲ್ಲಿ ಸುಮಾರು 3 ತಿಂಗಳ ಕಾಲ ನಮ್ಮ ಮನೆಯಲ್ಲಿ ಇಟ್ಟುಕೊಳ್ಳಕ್ಕೆ ನಮ್ಮ ಅಮ್ಮ ಸಮ್ಮತಿಸಿದರು, ನಂತರದ ದಿನಗಳಲ್ಲಿ ಆ ವಾರ್ಡನ್‌ನ್ನು ಕಿತ್ತುಹಾಕಲಾಯಿತು. ನಮ್ಮ ಹೋರಾಟಕ್ಕಂತೂ ಜಯ ಸಿಕ್ಕಿತು. ಪಾರ್ವತಮ್ಮನವರಿಗೂ ನಂತರ ಮಹಾರಾಣೀ ಕಾಲೇಜಿನ ಹಾಸ್ಟೆಲ್‌ನಲ್ಲಿ ಸೀಟು ಸಿಕ್ಕಿತು. 'ಮಹಾತ್ಮ ಗಾಂಧೀಜಿ ಕೀ ಜೈ' ಎನ್ನುವ ಹೋರಾಟಕ್ಕಿಂತ ಹೆಚ್ಚು ಖುಷಿ ಕೊಟ್ಟ ಹೋರಾಟ ಇದು. ಆಗ ಮೈಸೂರಲ್ಲಿ ನಾವು ಕೆಲವು ಗೆಳತಿಯರು ಸೇರಿ ವಯಸ್ಕರಿಗೆ ಸಾಕ್ಷರತೆಯ ತರಗತಿಗಳನ್ನು ನಡೆಸಿ ಪಾಠ ಹೇಳಿಕೊಡುತ್ತಿದ್ದೆವು. ಸುಮಾರು 150 ಮಂದಿಗಾದರೂ ರಾಮಾಯಣ, ಮಹಾಭಾರತ ಓದುವಷ್ಟು ಮಟ್ಟಿಗೆ ಅಕ್ಷರಾಭ್ಯಾಸ ಮಾಡಿಸಿದ್ದೇವೆ, ಎನ್ನುವ ತೃಪ್ತಿ ನಮ್ಮದು.

ಇನ್ನು ಹೋರಾಟ ಅಂದಾಗ ನನಗೆ ನನ್ನ ಕಣ್ಣು ಮುಂದೆ ಬರುವುದು ನಮ್ಮ ತಾಯಿಯದೇ ಚಿತ್ರ. ಚಿಕ್ಕ ವಯಸ್ಸಿನಲ್ಲಿ ಗಂಡನನ್ನು ಕಳೆದುಕೊಂಡು ನಾಲ್ಕು ಮಕ್ಕಳನ್ನು ಟೀಚರ್ ಕೆಲಸ ಮಾಡಿ ಬೆಳೆಸಿದರು. ಅವರಿಗೂ ತುಂಬ ದೇಶಪ್ರೇಮ ಇತ್ತು. ನಾನು ಸ್ವಾತಂತ್ರ್ಯ ಹೋರಾಟದ ಕೆಲಸ ಮಾಡುತ್ತಿದ್ದಾಗ ನಮ್ಮ ವಠಾರ-ದವರೆಲ್ಲಾ ಬಯ್ದರೂ ನಮ್ಮ ತಾಯಿ ಮಾತ್ರ ನಮ್ಮನ್ನು ಬಯ್ಯುತ್ತಿರಲಿಲ್ಲ. ಸಂಪ್ರದಾಯ ವಿರುದ್ಧದ ನನ್ನ ಮದುವೆಯನ್ನು ಬೆಂಬಲಿಸಿದರು. ದಲಿತ ಹೆಣ್ಣುಮಗಳಾದ ಪಾರ್ವತಮ್ಮನನ್ನು ನಮ್ಮ ಮನೆಯಲ್ಲಿ ಇಟ್ಟುಕೊಳ್ಳಲು ಅನುಮತಿಸಿದರು. ಅಷ್ಟೇ ಅಲ್ಲ, ಒಮ್ಮೆ ಗಾಂಧಿ ಉಪವಾಸ ಮಾಡುತ್ತಿದ್ದಾಗ ನಾವು ಮನೆಯ ಹುಡುಗರೆಲ್ಲಾ ಉಪವಾಸ ಮಾಡುತ್ತಿದ್ದರೆ, ಅವರೂ ನಮ್ಮೊಂದಿಗೆ ಉಪವಾಸ ಮಾಡಿದರು.

-ಎನ್. ಗಾಯತ್ರಿ

## ಎನ್.ಪಿ. ಶಂಕರನಾರಾಯಣರಾವ್

**''ಸ್ವಾತಂತ್ರ್ಯಗಂಗೆಯ ಸಾವಿರ ತೊರೆಗಳು'' ಗ್ರಂಥದ ಲೇಖಕ ಎನ್.ಪಿ. ಶಂಕರನಾರಾಯಣರಾವ್‌ರವರನ್ನು ಅಚಲ ಪರವಾಗಿ ಭೇಟಿ ಮಾಡಿದಾಗ ಅವರು ನಮ್ಮ ಮುಂದೆ ಕ್ವಿಟ್ ಇಂಡಿಯಾ ಚಳುವಳಿ ಮತ್ತು ನಂತರದ ಸಂದರ್ಭವನ್ನು ವಿಶದವಾಗಿ ಸುಮಾರು ಗಂಟೆಗಳ ಕಾಲ ನಮ್ಮ ಮುಂದೆ ಬಿಚ್ಚಿಟ್ಟರು. ಅವರ ಅನುಭವ ಪ್ರಪಂಚದಲ್ಲಿ ಮಹಿಳೆಯರು ಹೆಚ್ಚು ಕಾಣಿಸಿಕೊಂಡಿಲ್ಲದಿರಬಹುದಾದರೂ ಹೆಣ್ಣಿನ ಪಾತ್ರವನ್ನು ಕುರಿತ ಅವರದೇ ದೃಷ್ಟಿಕೋನ ಅವರ ಮಾತುಗಳಿಂದ ನಮಗೆ ಸಿಕ್ಕುತ್ತದೆ.**

''ನನ್ನ ತಾಯಿ ತುಂಬಾ ಮುಂದುವರಿದ ಹೆಣ್ಣು. ಅಕ್ಕ ಗೌರಮ್ಮ ಕೂಡ ವಿದ್ಯಾರ್ಥಿ ಸಂಘಟನೆಯಲ್ಲಿದ್ದವಳು. ನನಗೆ ತಿಳಿದ್ಹಾಗೆ ನಮ್ಮೊಡನೆ ಯಾವ ಹುಡುಗಿಯರೂ ಜೈಲಿಗೆ ಬಂದಿರಲಿಲ್ಲ. ನಾನು ವಿಶೇಷವಾಗಿ ಗುರುತಿಸುವ ಮತ್ತು ಗೌರವಿಸುವ ಹೆಣ್ಣಿನ ಪಾತ್ರವೆಂದರೆ, ಗಂಡಸರ ಅನುಪಸ್ಥಿತಿಯಲ್ಲಿ ಹೆಂಗಸರು ಮನೆಯನ್ನು ನಿಲ್ಲಿಸಿದರು ಹಾಗೂ ರಕ್ಷಿಸಿದರು ಎನ್ನುವುದು. ಮನೆಯ ಗಂಡಸರಿಗೆ ಬೆಂಬಲವಾಗಿ ನಿಂತರು. ಇದರಿಂದ ಮಹಿಳೆಯರ ಪಾತ್ರವೇನೂ ಕಡಿಮೆಯೇನಲ್ಲ. ಮನೆ ಮುರಿಯದೆ ಗಂಡ ಮತ್ತು ಮಗ ಜೈಲಿನಲ್ಲಿ ಸೇರಿದಾಗ ಮನೆಯನ್ನು ಕಾಪಾಡಿದರು. ನನ್ನ 'ಸ್ವಾತಂತ್ರ್ಯ ಸಂಗ್ರಾಮ'ದ ಪುಸ್ತಕದ ಮಹಿಳೆಯರ ಪಾತ್ರ ಕುರಿತ ಅಧ್ಯಾಯವೊಂದು ಇರಬೇಕಿತ್ತೆಂದು ಯಾರೋ ಸೂಚಿಸಿದಾಗ ನಾನು ಹೇಳಿದ್ದು ಇದು: ''ಮಹಿಳೆಯರ ಪಾತ್ರ ಇರೋದೇ ಇದರಲ್ಲಿ. ಗಂಡಂದಿರು ಜೈಲಿಗೆ ಹೋದಾಗ, ಅವರನ್ನು ಗಲ್ಲಿಗೆ ಹಾಕಿದಾಗ, ಒಂದು ಕಡೆ ಕಣ್ಣೀರು ಸುರಿಸುತ್ತಾ, ಮತ್ತೊಂದು ಕಡೆ ಸಂಸಾರ ರಥ ಸಾಗಿಸಿದರು. ಅವರಿಗೆ ಸಾಷ್ಟಾಂಗ ನಮಸ್ಕಾರ ಹಾಕಬಹುದು- ಇದನ್ನು ಭಾವನಾತ್ಮಕವಾಗಿ ಹೇಳ್ತೀನಿ ಅಂತ ಅನ್ಕೊಬ್ಯಾಡಿ.''

ಹೆಣ್ಣಿನ ಹೋರಾಟದ ಯಾವ ನೆಲೆ ಯಾರಿಗೆ ಹೆಚ್ಚು ಮುಖ್ಯವಾಗುತ್ತದೋ, ಎಂದು ವಿಸ್ಮಯಗೊಂಡು ಅವರಿಂದ ಬೀಳ್ಕೊಂಡೆವು.

*

## ಇಚ್ಛಾಶಕ್ತಿಯ ನೀಕ್ಷಿಸಿ

*೧೯೪೭ ಆಗಸ್ಟ್ ೧೫ನೇ ತಾರೀಕಿಗೆ ಭಾರತಕ್ಕೆ ಸ್ವಾತಂತ್ರ್ಯವನ್ನು ಕೊಡುವ ತೀರ್ಮಾನವಾಯಿತು. ಭಾರತವೆಸಗಿದ ವೀರ ಸತ್ಯಾಗ್ರಹ ಅಸಾಮಾನ್ಯವಾದುದು. ಜಗದೀಶನೂ ಇದನ್ನು ಮೆಚ್ಚಿ ಅಚ್ಚರಿಗೊಂಡಿದ್ದಾನೆ. ಭಾರತೀಯರ ಆತ್ಮವಿಶ್ವಾಸ ಇಚ್ಛಾಶಕ್ತಿಗಳು ಜಗದಾಶ್ಚರ್ಯಕರವಾದ ವಿಜಯವನ್ನು ಸಾಧಿಸಿ ಸ್ವರಾಜ್ಯವನ್ನು ಪಡೆದ ಸಾಹಸದ ಹೆಮ್ಮೆ ಜಗದೀಶನನ್ನೇ ಹೀಗೆ ಪ್ರಶ್ನೆ ಮಾಡುತ್ತದೆ.*

**ರಾಗ-ಬಿಲಹರಿ ರೂಪಕ-ತಾಳ**

**ಪಲ್ಲವಿ**

ಮೆಚ್ಚಿದೆಯಾ ಮನಸಾರಾ ಮುಚ್ಚುಮರೆ ಯದೇತಕೆ

**ಅನುಪಲ್ಲವಿ**

ಪ್ರಚ್ಛನ್ನವೇಷದಲಿ ಪರಿಕಿಸಿ ಭಾರತ ವರ್ಷವ
ಇಚ್ಛಾಶಕ್ತಿಯ ನೀಕ್ಷಿಸಿ ಅಚ್ಚರಿಯ ನಾಂತೆಯಾ

**ನುಡಿ-೧**

ಸ್ವಾತಂತ್ರ್ಯವ ಸಾರಿ ಸಾರಿ ಪರಾಕ್ರಮದಲಿ
ಜ್ಯೋತಿರ್ಜಗವ ನಿರ್ಮಿಸಲು ಶಪಥರಾಗಿ
ಪಾತಕ ತಮೋರಾಜ್ಯ ಧ್ವಂಸ ಪ್ರಳಯಕಾಲ
ದೂತ ರೆಸಗಿದ ವೀರ ಸತ್ಯಾಗ್ರಹವ ನೋಡಿ

**ನುಡಿ-೨**

ದುಷ್ಕಾಲ ನೀತಿ ಧರ್ಮವನೆಲ್ಲ ಧಿಕ್ಕರಿಸಿ
ಶುಷ್ಕೋಪಚಾರದ ತಂತ್ರವನು ಭೇದಿಸಿ
ನಿಷ್ಕಾಮ ಸೇವೆಯಲಿ ನಿರ್ಮಲಾಚರಣೆಯಲಿ
ಮುಷ್ಕರ ಮಹಾಸ್ತ್ರ ಪ್ರಯೋಗಿಸಿದ ಚಾತುರಿಯ

**ನುಡಿ-೩**

ಅಂಧ ಜೀವನ ಬಿಸುಟು ಮಂದಗತಿ ಮೂದಲಿಸಿ
ಇಂದಾತ್ಮ ಗೌರವಕೆ ಕಾದುವೀ ಕಜ್ಜದಲಿ
ಬಂಧುಗಳೆ! ಬಂದು ಭಾಗಿಗಳಾಗಿ ರೆಂದೆನುತ
ಮುಂದಿನಾ ಚರಿತೆಯನು ಬಗೆದ ವಾಂಛಿತವ

**ನುಡಿ-೪**

ನವ ನವೋದಯಕೆ ಮಣಿದು ಭುವಿಗೆ ಶಾಂತಿ ಶಾಂತಿಯೆನುತ
ನವಜೀವನ ಧರ್ಮಕಾಗಿ ಅವಭೃತಸ್ನಾನ ವೆಸಗಿ
ನಿವೇದಿಪ ವಿಧಾನವೆಲ್ಲ ಅವಧಾರಿಸಿ ಸಾಧುವೆನುತ
ಪವಿತ್ರ ಭಾರತದ ವಿಜಯ ಭೇರಿಯ ದನಿಯಾಲಿಸಿ

-ಭಾರತಿ
(ತಿರುಮಲೆ ರಾಜಮ್ಮ)

## ಭಾರತಮಾತೆಯ ವಾಕ್ಯ

ಏಳಿರಿ ಕೇಳಿರಿ ಸುತರೆ ಬಾಳು ಮುಳುಗುತಲಿಹುದು
ತಾಳಲಾರೆ ನನ್ನ ಒಡಲ ದುಃಖವಿದನು
ಪರರ ಬಲೆಯೊಳು ಸಿಲುಕಿದೆನ್ನ ಬಿಡಿಸಿದಿರಿ
ಅರಿವು ಮೂಡಿತು ಎಂದು ಬರಿದೆ ಕೂಗಿದಿರಿ
ತಾಯೆ ಭಾರತಿಯೆಂದು ಕರವ ಮುಗಿಯುವಿರಿ
ಧ್ಯೇಯವಿಲ್ಲದ ಹೇಯ ಬಾಳ ಹೊರೆಯುವಿರಿ
ಎಲ್ಲಿ ಜನಿಸಿದೆನೆಂಬ ಅರಿವ ನೀಗಿದಿರಿ

ಎಲ್ಲ ಅರಿತವರಂತೆ ಮಾತನಾಡುವಿರಿ
ಪುಣ್ಯಭೂಮಿಯಲಿರುವುದೆನ್ನ ಅರಮನೆಯು
ಬಣ್ಣಿಸಲು ಆಳವಲ್ಲವಿದರ ಐಸಿರಿಯು
ಪುಣ್ಯನದಿಗಳು ಹರಿದುದೆನ್ನ ಅರಮನೆಯಲ್ಲಿ
ಪುಣ್ಯಗಿರಿಗಳು ಇರುವುದೆನ್ನ ಅರಮನೆಯಲ್ಲಿ
ಪುಣ್ಯಕ್ಷೇತ್ರಗಳಿರುವುದೆನ್ನ ಅರಮನೆಯಲ್ಲಿ
ಚಿನ್ನ ಬೆಳ್ಳಿಯು ಸಿಗುವುದೆನ್ನ ಅರಮನೆಯಲ್ಲಿ
ದಿವ್ಯಗ್ರಂಥಗಳಿರುವುದೆನ್ನ ಅರಮನೆಯಲ್ಲಿ
ದಿವ್ಯಯಾಜ್ಞವು ಸಿಗುವುದೆನ್ನ ಅರಮನೆಯಲ್ಲಿ
ಯಜ್ಞಯಾಗಗಳಾದುವೆನ್ನ ಅರಮನೆಯಲ್ಲಿ
ಸುಜ್ಞಾನಿಗಳು ಇದ್ದರೆನ್ನ ಅರಮನೆಯಲ್ಲಿ
ಧೀರಕುವರರು ಇದ್ದರೆನ್ನ ಅರಮನೆಯಲ್ಲಿ
ವೀರ ರಮಣಿಯರಿದ್ದರೆನ್ನ ಅರಮನೆಯಲ್ಲಿ

ಪರಮ ವೈಭವದಿಂದ ಮೆರೆದು ನಲಿದೆನು ಅಂದು
ಪರಮದುಃಖದಿ ಮುಳುಗಿ ನರಳುತಿಹೆನಿಂದು
ಪರದೇಶದವರೆನ್ನ ಅರಮನೆಯ ಕಂಡರು
ಪರಿಪರಿಯ ನೋಟಗಳ ನೋಡಿ ಬೆರಗಾದರು
ಪರಿಪರಿಯ ನಾಟಕವ ತೋರಿದರು ಕೆಲರು
ಪರಿಪರಿಯ ವೇಷಗಳ ಧರಿಸಿದರು ಕೆಲರು
ಅರಿತುಕೊಳ್ಳದೆ ನೀವು ಮರುಳಾದಿರವರಿಗೆ
ಮರುಮಾತನಾಡದೆಯೆ ಕರೆತಂದಿರೊಳಗೆ
ಒಳಗೆ ಬಂದೊಡನೆ ನಿಮ್ಮನೆ ತುಳಿದರವರು
ಝಳಪಿಸುತಲವರ ಬಾವುಟವೇರಿಸಿದರು
ನಮ್ಮ ಆಜ್ಞೆಯ ಮೀರಿ ನಡೆಯದಿರಿ ಎಂದರು
ಗುಮ್ಮನಾಡಿಸಿ ನಿಮ್ಮ ಸುಮ್ಮನಿರಿಸಿದರು

ಪುಣ್ಯದರಮನೆಯ ಚಿನ್ನವನು ಕೊಂಡೊಯ್ದರು
ಬಣ್ಣಕಾಗದ ಕನ್ನಡಿಗಳೆ ನಿಮಗಿತ್ತರು
ಮದ್ದುಗುಂಡುಗಳ ಗದ್ದಲವ ತೋರಿದರು
ಸದ್ದು ಮಾಡದೆ ನಿಮ್ಮ ಬಾಯಿ ಮುಚ್ಚಿದರು
ಅರಮನೆಯ ನಡುವೆ ಸೆರೆಮನೆಯ ಸೃಜಿಸಿದರು
ನರಕವನು ನಾಕದೊಳಗಿಕ್ಕಿ ಸೊಕ್ಕಿದರು
ಎನ್ನರಮನೆಗವರೆ ಆಳರಸರಾದರು
ಎನ್ನ ಕುವರರೆ ನೀವೆ ಅಂದವರೆ ದಾಸರು
ಮರೆತಿರೇ ಮಕ್ಕಳಿರ ಕರ್ಕಶದ ಬಾಳ
ಭರಿಸಲಾಗದ ಪರಿಯ ಅಂದಿನಾ ಗೋಳ

ನಾಗೈದ ಪುಣ್ಯವೋ ಶಿವನ ಕಾರುಣ್ಯವೋ
ಯೋಗೀಶನುದಯವದು ನಿಮ್ಮ ಅದೃಷ್ಟವೋ
ಹರಿದನವ ತೊಡರಿದ್ದ ಎನ್ನ ಸಂಕೋಲೆಯ
ಹರಿಸಿದನು ನಿಮಗಿದ್ದ ದಾಸ್ಯದಾಬಲೆಯ

ಮೂರು ದಿನ ಕಳೆದಿಲ್ಲ ಮರೆತಿರದನೆಲ್ಲ
ಘೋರಕೃತ್ಯಕೆ ಮತ್ತೆ ತೊಡಗಿರುವಿರಲ್ಲ
ಒಂದೆ ತಾಯ್ಮಕ್ಕಳೆಂಬ ಭಾವವಿಲ್ಲ
ಹೊಂದಿಕೊಂಡಿರುವ ಸುಂದರ ಹೃದಯವಿಲ್ಲ
ಒಬ್ಬರೊಬ್ಬರ ಕಿತ್ತು ತಿನ್ನ ಬಯಸುವಿರಿ

ದಬ್ಬಾಳಿಕೆಯ ನಡೆಸಿ ಗೆದ್ದೆವೆನ್ನುವಿರಿ
ಆಗದಾಗದು ಸುತರೆ ಸುಖವಾಗದಂತು
ಈ ಗಾಳಿ ನಿಮಗೆ ಮತ್ತೆಲ್ಲಿಂದ ಬಂದು
ಹಳೆಯ ರೋಗವ ತರಿಪುದೀ ಹಳೆಯ ಹಿಂಡು
ಕೊಳೆಯುಣಿಸೆ ನಂಬುವುದೇ ನಮ್ಮ ಪಾಡು
ಏಳಿರಿನ್ನೆಚ್ಚತ್ತು ಬಾಳ ಹದಗೊಳಿಸಿ
ಜನಕಜೆಯು ಪೂಜಿಪಳು ಪೂಗುಚ್ಛ ಮುಡಿಸಿ

- ಬೆಳಗೆರೆ ಜಾನಕಮ್ಮ

# ಒಬ್ಬ ಕ್ರಾಂತಿಕಾರಿಣಿಯ ಬದುಕು

**ಇಂಡಿಯನ್ ನ್ಯಾಷನಲ್ ಆರ್ಮಿಯಲ್ಲಿ ಸುಭಾಷ್‌ಚಂದ್ರಬೋಸರ ಜೊತೆ ಕೆಲಸ ಮಾಡಿದ ಧೀರ ಮಹಿಳೆ ಕ್ಯಾಪ್ಟನ್ ಲಕ್ಷ್ಮಿ ಸೆಹಗಾಲ್. ಝಾನ್ಸಿರಾಣಿ ರೆಜಿಮೆಂಟಿನ ಕ್ಯಾಪ್ಟನ್ ಆಗಿ ಕೆಲಸ ಮಾಡಿದ ಅಪರೂಪದ ಮಹಿಳೆ ಲಕ್ಷ್ಮಿಯ ಬದುಕೇ ಅನುಭವದ ಹೊಸಲೋಕವನ್ನು ನಮ್ಮ ಮುಂದೆ ತೆರೆದಿಡುತ್ತದೆ. ಅವರ ಆತ್ಮಕಥನ 'ಕ್ರಾಂತಿಕಾರಿಣಿಯ ಬದುಕು' ಕೃತಿಯಿಂದ ಆಯ್ದ ಕೆಲವು ಭಾಗಗಳನ್ನು ಶ್ರೀಮತಿ ಹೆಚ್.ಎಸ್.ಗೀತಾ ಅವರು ಇಲ್ಲಿ ಸಂಗ್ರಹಾನುವಾದ ಮಾಡಿಕೊಟ್ಟಿದ್ದಾರೆ.**



"ರಂಗೂನಿಗೆ ನನ್ನನ್ನು ಕರೆಸಿಕೊಳ್ಳುವುದಾಗಿ ನೇತಾಜಿಯವರು ನನಗೆ ಭರವಸೆಯನ್ನೇನೋ ಕೊಟ್ಟಿದ್ದರು. ಆದರೆ ಜನವರಿ 2ರಂದು ನನಗೆ ಸಿಕ್ಕ ಸಂದೇಶದ ಪ್ರಕಾರ ನಾನು ಜನವರಿ 5ರಂದು ಬ್ಯಾಂಕಾಕ್‌ಗೆ ಹೋಗಿ ಅಲ್ಲಿಂದ ನೇತಾಜಿಯವರೊಡನೆಯೇ ರಂಗೂನಿಗೆ ಹೋಗಬೇಕು ಎಂದಿತ್ತು. ಇದು ನನಗೆ ತುಸು ಅಚ್ಚರಿಯನ್ನೂ ಉಂಟುಮಾಡಿತು. ಸರಿ, ಮುಂದಿನ ಮೂರು ದಿನಗಳು ಅತ್ಯಂತ ಗಡಿಬಿಡಿಯಲ್ಲೇ ಕಳೆದೆವು. ಶಿಬಿರದ ಹೊಣೆಯನ್ನು ಶ್ರೀಮತಿ ದೇವರ್‌ಗೆ ಒಪ್ಪಿಸಿದೆ. ಮುಂದಿನ 2 ತಿಂಗಳ ಅವಧಿಯ ತರಬೇತಿ ಕಾರ್ಯಕ್ರಮಗಳ ಬಗ್ಗೆ ಯೋಜನೆಗಳನ್ನು ರೂಪಿಸಬೇಕಿತ್ತು. ಹೊಸದಾಗಿ ನೇಮಕಗೊಳ್ಳುವವರಿಗೆ ಬೇಕಾದ ಸಾಮಾನು-ಸರಂಜಾಮುಗಳಿಗೆ ಸಿದ್ಧತೆ ಮಾಡಬೇಕಿತ್ತು. ಅಂತೂ, ಈ ಎಲ್ಲವನ್ನೂ ಜನವರಿ 4ರಂದು ರಾತ್ರಿಯ ವೇಳೆಗೆ ಪೂರೈಸಿದೆ.

**ಭಾರತೀಯ ರಾಷ್ಟ್ರೀಯ ಸೇನೆಯಲ್ಲಿ (INA)**

ಮರುದಿನ ಬೆಳಿಗ್ಗೆ ಜಪಾನೀ ಮಿಲಿಟರಿ ವಿಮಾನದಲ್ಲಿ ಬ್ಯಾಂಕಾಕ್‌ಗೆ ಪ್ರಯಾಣ ಬೆಳೆಸಿದೆ. ಭಾರತೀಯ ರಾಷ್ಟ್ರೀಯ ಸೇನೆಯ (INA) ಒಂದಿಬ್ಬರು ಅಧಿಕಾರಿಗಳು ಮತ್ತು ನನ್ನನ್ನು ಬಿಟ್ಟರೆ ಆ ವಿಮಾನದಲ್ಲಿದ್ದವರೆಲ್ಲಾ ಜಪಾನೀ ಅಧಿಕಾರಿಗಳೇ. ಕರ್ನಲ್ ಹಾಗೂ ಇನ್ನೂ ಉನ್ನತ ಸ್ಥಾನಗಳಲ್ಲಿದ್ದವರು. ಮಿಲಿಟರಿ ವಿಮಾನದಲ್ಲಿ ಮಹಿಳೆಯೊಬ್ಬಳನ್ನು ಕಂಡು ಅವರಿಗೆ ಆಶ್ಚರ್ಯ. ಅಷ್ಟೇ ಅಲ್ಲ, ನಮ್ಮನ್ನು ಬರಮಾಡಿಕೊಳ್ಳಲು ನೇತಾಜಿಯವರ ADC ಮತ್ತು ಥಾಯ್ ವಿದೇಶಾಂಗ ಕಛೇರಿಯ ಅಧಿಕಾರಿಗಳು ಬಂದಿದ್ದನ್ನು ಕಂಡು ಅವರಿಗೆ ಇನ್ನೂ ವಿಸ್ಮಯ. ನಿಜ ಹೇಳಬೇಕೆಂದರೆ, ನನಗೂ ಸ್ವಲ್ಪ ಆಶ್ಚರ್ಯವೇ ಆಯಿತು ಅನ್ನಿ. ನಂತರ ನನ್ನ ಸಹಯಾತ್ರಿ 'ನೇತಾಜಿಯವರ ಕ್ಯಾಬಿನೆಟ್‌ದರ್ಜೆಯ ಸಚಿವೆಯಾಗಿ' ನನ್ನನ್ನು ಸ್ವಾಗತಿಸಲು ಆ ಅಧಿಕಾರಿಗಳು ಬಂದಿದ್ದಾರೆ ಎಂಬುದನ್ನು ನೆನಪಿಸಿದಾಗ 'ಹ್ಹಾ! ಹೌದಲ್ಲ!' ಎಂದುಕೊಂಡೆ. ಈ ವ್ಯವಸ್ಥೆಯೆಲ್ಲಾ ನೇತಾಜಿಯವರ ಆದೇಶದ ಮೇರೆಗೇ ನಡೆದದ್ದೆಂದು ನನಗೆ ನಂತರ ಗೊತ್ತಾಯಿತು. ನೇತಾಜಿಯವರ ಪ್ರಕಾರ ಯಾವುದೇ ಸ್ವತಂತ್ರ ಸರ್ಕಾರಕ್ಕೆ ಸಲ್ಲುವ ಗೌರವಾದರಗಳು ಪ್ರಾಂತ್ಯಸರ್ಕಾರ ಹಾಗೂ ಅದರ ಸಚಿವರಿಗೂ ಸಲ್ಲಬೇಕು.

ನೇತಾಜಿ ತಮ್ಮ ತಂಡದವರೊಡನೆ ಬ್ಯಾಂಕಾಕಿನಲ್ಲಿ ನೂತನವಾಗಿ ನಿರ್ಮಾಣವಾಗಿದ್ದ ರತ್ನಾಕೋಸಿನ್ ಹೋಟೆಲಿನಲ್ಲಿ ಥಾಯ್ ಸರ್ಕಾರದ ಅತಿಥಿಗಳಾಗಿ ತಂಗಿದ್ದರು. ಭ್ರಮಾಲೋಕದಂತಿದ್ದ ಹೋಟೆಲ್‌ಗೆ ಇದು ನನ್ನ ಮೊದಲ ಭೇಟಿಯಾಗಿತ್ತು. ಥಾಯ್ಲೆಂಡಿನಲ್ಲಿ ಯುದ್ಧಕಾಲದ ಯಾವುದೇ ನಿಬಂಧನೆಗಳಿರಲಿಲ್ಲ. ಕಾರಣ, ಅದೊಂದು ತಟಸ್ಥ ರಾಷ್ಟ್ರವಾಗಿತ್ತು. ಆದ್ದರಿಂದ ಜೀವನ ಇಲ್ಲಿ ಮಾಮೂಲು ಸ್ತರದಲ್ಲೇ ಸಾಗಿತ್ತು. ಎಲ್ಲಾ ಸಾಮಾನು ಸರಂಜಾಮುಗಳು, ಲಕ್ಷುರಿ ಎನ್ನಬಹುದಾದವುಗಳು ಕೂಡ ಇಲ್ಲಿ ಸುಲಭವಾಗಿಯೇ ದೊರಕುತ್ತಿದ್ದವು. ಹಾಗೆಂದ ಮಾತ್ರಕ್ಕೆ ಆಜಾದ್ ಹಿಂದ್ ಪಕ್ಷದ ಪ್ರಾಂತ್ಯ ಸರ್ಕಾರದ ಅಧಿಕಾರಿಗಳು ಬ್ಯಾಂಕಾಕ್ ಮತ್ತು ಸಾಯ್‌ಗಾಂಗ್‌ನಲ್ಲಿ ಐಷಾರಾಮದ ಜೀವನ ನಡೆಸುತ್ತಿದ್ದರು ಎನ್ನುವುದು ತಪ್ಪಾದೀತು. ಇಲ್ಲಿ ನಮ್ಮ ಪಡೆಗಳಿಗೆ ಬೇಕಾಗಿದ್ದ ಬಟ್ಟೆ ಬರೆ, ಅವಶ್ಯಕ ವಸ್ತುಗಳು ಹಾಗೂ ಜೀವ ಕಾಪಾಡುವ ಔಷಧಿಗಳು

ನಿರಾಯಾಸವಾಗಿ ಸಿಗುತ್ತಿದ್ದವು. ನಮ್ಮ ಅವಶ್ಯಕ ವಸ್ತುಗಳ ಪಟ್ಟಿಗಳು ಸಾಮಾನ್ಯವಾಗಿ ಉದ್ದುದ್ದವೇ ಇರುತ್ತಿದ್ದವು. ನೇತಾಜಿಯವರು ಮಾರುಕಟ್ಟೆಗಳಿಗೆ ಯಾವ ಸಲುವಾಗಿ ಹೋದರೂ ಕೂಡ, ಈ ಪಟ್ಟಿಗಳನ್ನು ಮಾತ್ರ ಅವಶ್ಯವಾಗಿ ತಮ್ಮಲ್ಲಿ ಇಟ್ಟುಕೊಂಡೇ ಇರುತ್ತಿದ್ದರು. ಇದು ಆ ದೇಶದ ಅಧಿಕಾರಿಗಳಿಗೆ ತುಸು 'ವಿಚಿತ್ರ' ಅನ್ನಿಸುತ್ತಿತ್ತು.

ಜನವರಿ 5ರಂದು ಥಾಯ್ಲೆಂಡಿನ ಅಂದಿನ ಪ್ರಧಾನಿ ಜನರಲ್ ನಕಾಮುರಾ ನೇತಾಜಿಯವರ ಗೌರವಾರ್ಥ ಔತಣಕೂಟ ಒಂದನ್ನೇರ್ಪಡಿಸಿದ್ದರು. ಆಗ ನೇತಾಜಿಯವರೊಂದಿಗೆ ನಾನೂ ಸಹ ಹೋಗಿದ್ದೆ. ಅಲ್ಲಿ ಫೀಲ್ಡ್‌ಮಾರ್ಷಲ್ ಸಂಗ್ರಾಂರವರ ಪರಿಚಯವಾಯಿತು. ಅದೂ ಇದೂ ಮಾತನಾಡುತ್ತಾ ಆಡುತ್ತಾ ಆತ ಹೇಳಿದರು 'ಆತನ ಹೆಂಡತಿಗೆ ರಾಣಿ ಝಾನ್ಸಿ ರೆಜಿಮೆಂಟಿನಲ್ಲಿ ಆಸಕ್ತಿ ಇದೆಯೆಂದೂ, ಆಕೆ ನನ್ನನ್ನು ಭೇಟಿಯಾಗಲು ಬಯಸುತ್ತಾರೆ' ಎಂದೂ. ಅದರಂತೆಯೇ ಮರುದಿನ ಬೆಳಿಗ್ಗೆ ಶ್ರೀಮತಿ ಸಂಗ್ರಾಂರವರನ್ನು ನಾನು ಭೆಟ್ಟಿಯಾದೆ. ನಮ್ಮ ಮಾತುಕತೆ ಸುದೀರ್ಘವಾಗಿಯೂ ಇತ್ತು. ಸ್ವಾರಸ್ಯಕರವಾಗಿಯೂ ಇತ್ತು. ಆಕೆಯೂ ಬಹಳ ಬುದ್ಧಿವಂತೆ; ಸುಂದರಿ ಕೂಡ. ಆಕೆಗೆ ಥಾಯ್ ಮಹಿಳೆಯರ ಸ್ಥಿತಿಗತಿಗಳ ಸುಧಾರಣೆ ಬಗ್ಗೆ ಕಾಳಜಿ. ಮೊದಲೇ ಹೇಳಿದಂತೆ, ಥಾಯ್ಲೆಂಡ್ ಏನೂ ಯುದ್ಧದಲ್ಲಿ ಭಾಗಿಯಾಗಿರಲಿಲ್ಲ. ಆದರೂ ಆಕೆಗೆ ಥಾಯ್ ಮಹಿಳೆಯರ ಸ್ವಯಂಸೇವಕ ದಳಗಳನ್ನು ರಚಿಸುವ ಹಂಬಲ. ಇಂಥಹ ಪಡೆಗಳಿಂದ ಮಹಿಳೆಯರ ಅಭ್ಯುದಯದ ಚಟುವಟಿಕೆಗಳಿಗೆ ನೆರವಾಗುತ್ತದೆ ಎಂಬುದೇ ಅವಳ ಆಶಯ. ಗ್ರಾಮೀಣ ಪ್ರದೇಶಗಳ ಮಹಿಳೆಯರು ಬಡತನಕ್ಕೆ ಬೇಸತ್ತು ಹಸಿರನ್ನರಸುತ್ತಾ ಪಟ್ಟಣಗಳಿಗೆ ಬರುತ್ತಾರೆ. ಇಲ್ಲಿ ಹಸಿರಿರಲಿ, ಬೇರೆ ಯಾವ ದಾರಿಯೂ ಕಾಣದೇ ವೇಶ್ಯಾವೃತ್ತಿಗೆ ಮೊರೆ ಹೋಗಬೇಕಾಗುತ್ತದೆ. ಆದ್ದರಿಂದ ಈ ಮಹಿಳಾ ಪಡೆಗಳನ್ನು ಹಳ್ಳಿಗಳಲ್ಲಿ ಹುಟ್ಟುಹಾಕಿದರೆ ಮಹಿಳೆಯರಿಗೆ ನೆರವಾದೀತೇನೋ ಎಂಬುದು ಆಕೆಯ ಅನಿಸಿಕೆ. ಆಕೆಯ ಅನಿಸಿಕೆಗಳು ಅನಿಸಿಕೆಗಳಾಗಿಯೇ ಉಳಿದವು; ಕೈಗೂಡಲಿಲ್ಲ ಎಂಬುದು ವಿಷಾದನೀಯ.

★ ★ ★

ಜನವರಿ 7ರಂದು ನೇತಾಜಿಯವರ ಜೊತೆ ನಾನು ಬ್ಯಾಂಕಾಕ್‌ನಿಂದ ರಂಗೂನಿಗೆ ಹೋದೆ. ನಾವು ಹೋಗಿದ್ದು ಜಪಾನೀ ಫೈಟರ್ ಬಾಂಬರ್ ವಿಮಾನದಲ್ಲಿ. ರಂಗೂನಿನಲ್ಲಂತೂ ನನಗೆ ನಾವು ಭಾರತಕ್ಕೆ ಮರುಳುತ್ತಿದ್ದೇವೇನೋ ಅನ್ನಿಸಿತ್ತು. ಕಾರಣವಿಷ್ಟೇ- ರಂಗೂನಿನಲ್ಲಿ ಬಹಳ ಜನ ಭಾರತೀಯರಿದ್ದರು. ಅಲ್ಲದೆ ಅಲ್ಲಿನ ಬರ್ಮೀಯರಲ್ಲಿ ಬಹುತೇಕ ಮಂದಿ ಹಿಂದೂಸ್ತಾನೀ ಭಾಷೆಯನ್ನು ಅರ್ಥಮಾಡಿಕೊಳ್ಳುವುದಷ್ಟೇ ಅಲ್ಲ, ಸರಾಗವಾಗಿ ಮಾತನಾಡಬಲ್ಲವರಾಗಿದ್ದರು. ಇಲ್ಲಿ ನಮಗೂ, ಜಪಾನೀಯರಿಗೂ ಸಂಪರ್ಕವೇ ಇರಲಿಲ್ಲ. ರಂಗೂನಿನ ಭಾರತೀಯರು ಸಾಕಷ್ಟು ಆಸ್ತಿವಂತರಾಗಿದ್ದರು. ಜಪಾನ್ ಬರ್ಮಾವನ್ನು ಆಕ್ರಮಿಸಿಕೊಂಡಾಗ, ಇವರಲ್ಲಿ ಅನೇಕರು ತಮ್ಮ ಮನೆ, ಆಸ್ತಿ ತೊರೆದು ಭಾರತಕ್ಕೆ ಓಡಿಹೋದರು. ಇಂಥಹ ಆಸ್ತಿ ಈಗ ಆಜಾದ್ ಹಿಂದ್ ಸರ್ಕಾರದ ವಶವಾಯಿತು. ಈ ಪೈಕಿ ನೇತಾಜಿ ಹಾಗೂ ಅವರ ಸಿಬ್ಬಂದಿಗೆ ಒಂದು ದೊಡ್ಡ ಬಂಗಲೆ ಸಿಕ್ಕಿತು; ಹಾಗೂ INA ಯ ಸುಪ್ರೀಂಕೋರ್ಟಿಗೆ, ದಿ ಇಂಡಿಯನ್ ಇಂಡಿಪೆಂಡೆನ್ಸ್ ಲೀಗಿಗೆ (IIL) ಮತ್ತು ಇನ್ನೂ ರೂಪುಗೊಳ್ಳಬೇಕಾಗಿದ್ದ ಬ್ಯಾಂಕ್ ಆಫ್ ಆಜಾದ್ ಹಿಂದ್‌ಗೆ ಹಲವು ಮನೆಗಳನ್ನೊಳಗೊಂಡ ಒಂದು ಎಸ್ಟೇಟ್. ಆ ವೇಳೆಗಾಗಲೇ 50 ಮಂದಿಯಿದ್ದ ರಾಣಿ ಝಾನ್ಸಿ ರೆಜಿಮೆಂಟ್ ಶಿಬಿರ ತಿನಾಗ್ಸನ್ ಎಂಬ ಬಡಾವಣೆಯಲ್ಲಿ ಆರಂಭವಾಗಿತ್ತು. ನಾನು ಅಲ್ಲೇ ವಾಸ್ತವ್ಯ ಹೂಡಿದೆ. ಶ್ರೀಮತಿ ಚಂದ್ರನ್ ಎಂಬುವರು ಈ ಶಿಬಿರದ ಮೇಲ್ವಿಚಾರಕಿ. ಹಿಂದೆ ಶಿಕ್ಷಕಿಯಾಗಿದ್ದವರು. ಮಾತೃಹೃದಯದ ಮಮತಾಮಯಿ; ಮಿಲಿಟರಿ ವ್ಯಕ್ತಿತ್ವದ ಗತ್ತಿರಲಿಲ್ಲ.

### ಝಾನ್ಸಿರೆಜಿಮೆಂಟಿನಲ್ಲಿ

ಈಗಾಗಲೇ ತರಬೇತಿ ಹೊಂದಿದ ರಾಣಿ ಝಾನ್ಸಿ ರೆಜಿಮೆಂಟಿನ ಸಿಬ್ಬಂದಿಯನ್ನೂ, ಹಾಗೂ ತರಬೇತಿದಾರರನ್ನೂ ಕೂಡಲೇ ಸಿಂಗಪುರದಿಂದ ರಂಗೂನಿಗೆ ಕಳಿಸುವಂತೆ ಸಿಂಗಪುರಕ್ಕೆ ಸಂದೇಶ ಕಳಿಸಬೇಕೆಂದು ನಾನು ನೇತಾಜಿಯವರಲ್ಲಿ ವಿನಂತಿಸಿಕೊಂಡೆ. ಈ ಮಧ್ಯೆ ತರಬೇತುದಾರರಿಲ್ಲದೆಯೇ ನಾವು ದೈಹಿಕ ಕಸರತ್ತು, ರೈಫಲ್ ತರಬೇತು ಹಾಗೂ ಕವಾಯತು ಮುಂತಾದುವುಗಳನ್ನು ಬೆಳಿಗ್ಗೆ ಮತ್ತು ರಾತ್ರಿ ಮಾಡಲಾರಂಭಿಸಿದೆವು. ನಮ್ಮಲ್ಲಿ ಅತ್ಯುತ್ತಮರಾಗಿದ್ದವರೆಂದರೆ ಗೌರಿ ಭಟ್ಟಾಚಾರ್ಯ, ಗಂಗೂಲಿ ಸೋದರಿಯರೆಂದು ಹೆಸರಾದ ಕರುಣಾ, ಅರುಣಾ ಮತ್ತು ಮಾಯಾ, ಶಕುಂತಲಾ ಗಾಂಧಿ, ರಮಾ ಮೆಹ್ತಾ, ಎಮಿಲಿ ಸ್ಯಾಮುಯಿಲ್ ಮತ್ತಿತರರು.

ಶಿಬಿರದ ಕೆಲಸ ಕಾರ್ಯಗಳನ್ನು ಗಮನಿಸುವುದಲ್ಲದೆ, ನೇತಾಜಿಯವರು ರಾಜಕೀಯ ಧುರೀಣರ ಜೊತೆ ಮಾತುಕತೆ ನಡೆಸಲು ಹೋದಾಗ, ಅವರೊಂದಿಗೆ ನಾನೂ ಹೋಗುತ್ತಿದ್ದೆ. ಇವರಲ್ಲಿ ಪ್ರಮುಖರಾದವರೆಂದರೆ- ಬರ್ಮಾಸರ್ಕಾರದ ಮುಖ್ಯಸ್ಥ ಡಾ॥ ಬಾ ಮಾವ್, ಬರ್ಮಾದಲ್ಲಿದ್ದ ಜಪಾನೀ ಪಡೆಯ ಜನರಲ್ ಆಫೀಸರ್ ಇನ್ ಕಮ್ಯಾಂಡ್ ಜನರಲ್ ಕವಾಬೇ ಹಾಗೂ ಬರ್ಮಾದಲ್ಲಿ ಜಪಾನಿನ ಪ್ರತಿನಿಧಿಯಾಗಿದ್ದ ರೆಂಜಾ ಸಾವಡಾ, ಇತ್ಯಾದಿ.

ಜನರಲ್ ಕವಾಚೀಯವರನ್ನು ಭೆಟ್ಟಿಯಾದಾಗ ನೇತಾಜಿಯವರು ಆಕ್ರಮಣ ಹೇಗೆ ಸಾಗಿದೆ- ಸೇನೆ ಎತ್ತ ಸಾಗಿದೆ ಮುಂತಾದ ವಿವರಗಳನ್ನು ತಿಳಿಯಲು ಪ್ರಯತ್ನಿಸುತ್ತಿದ್ದರು. ಆದರೆ ಅವರಿಂದ ಅಂಥಹ ಯಾವುದೇ ವಿವರಗಳು ದೊರಕುತ್ತಿರಲಿಲ್ಲ.

ಲೆಫ್ಟಿನೆಂಟ್ ಕರ್ನಲ್ ಷಾ ನವಾಜ್‌ಖಾನ್ ತಮ್ಮ ನಂ.1 ಗೆರಿಲ್ಲಾ ರೆಜಿಮೆಂಟ್ ಜೊತೆ ರಂಗೂನಿಗೆ ಆಗಮಿಸಿದರು. ನಮ್ಮ ಪಡೆಗಳಲ್ಲಿ ಈ ರೆಜಿಮೆಂಟ್ ಕಾರ್ಯಾಚರಣೆ ಆರಂಭಿಸುವ ಮೊದಲ ತಂಡ-ವಾದ್ದರಿಂದ ನೇತಾಜೀ ಈ ರೆಜಿಮೆಂಟಿಗೆ ಆಗಾಗ್ಗೆ ಭೇಟಿ ನೀಡುತ್ತಿದ್ದರು. ಅವರ ಉಪಕರಣಗಳ ಬಗ್ಗೆ ಅತ್ಯಂತ ಕಾಳಜಿ ವಹಿಸುತ್ತಿದ್ದರು; ಖುದ್ದಾಗಿ ಪ್ರತಿ ಅಂಶದ ಮೇಲೂ ನಿಗಾ ಇಡುತ್ತಿದ್ದರು.

ನಂತರ ಜನವರಿ 22ರಂದು ಈ ಗೆರಿಲ್ಲಾ ರೆಜಿಮೆಂಟ್ ತನ್ನ ಆಕ್ರಮಣಕಾರೀ ಕಾರ್ಯಾಚರಣೆಯ ಪ್ರದರ್ಶನ ನಡೆಸಿತು. ಇದರಲ್ಲಿ ಪಾಲ್ಗೊಳ್ಳಲು ನನಗೂ ಸಹ ಅವಕಾಶ ಸಿಕ್ಕಿತ್ತು. ನನ್ನ ಪಾಲಿಗೆ ಅದೊಂದು ಸಂತಸದ ಅನುಭವ.

ಜನವರಿ 15ರಂದು, ರಂಗೂನಿನ IIL ನ ಮುಖ್ಯ ಕಛೇರಿಯಲ್ಲಿ ನಾನು ಮಹಿಳಾ ಶಾಖೆಯೊಂದನ್ನಾರಂಭಿಸಿದ್ದೆ. ಇಲ್ಲಿನ ತಂಡದಲ್ಲಿ ನುರಿತ ಕಾರ್ಯಕರ್ತರಿದ್ದುದರಿಂದ ಎಲ್ಲಾ ಕೆಲಸಗಳು ಸುಗಮವಾಗಿ ಸಾಗುತ್ತಿದ್ದವು. ನೇತಾಜಿಯವರು ರಂಗೂನಿಗೆ ಮೊದಲ ಬಾರಿಗೆ ಬಂದಾಗಿನಿಂದಲೂ ಇವರಿಗೆ INA ಮತ್ತು IIL ನ ಕೆಲಸ ಕಾರ್ಯಗಳಲ್ಲಿ ಆಸಕ್ತಿ ಮೂಡಿತ್ತು. ಅವರು ನಮ್ಮ ಆಸ್ಪತ್ರೆಗಳಿಗೆ ಬೇಕಾಗುತ್ತಿದ್ದ ವಸ್ತುಗಳನ್ನು ಸಂಗ್ರಹಿಸುತ್ತಿದ್ದರು; ಸರದಿ ಪ್ರಕಾರ ಅಡುಗೆ ಮಾಡಿ ಮುಂಚೂಣಿಯಲ್ಲಿದ್ದವರಿಗೆ ಒಣ ಪದಾರ್ಥಗಳನ್ನು ಕಳಿಸುತ್ತಿದ್ದರು. ರಂಗೂನಿನ ಮೇಲೆ ವೈಮಾನಿಕ ದಾಳಿಯ ಸಂದರ್ಭದಲ್ಲಿ ರಕ್ಷಕ ತಂಡಗಳನ್ನು ಯೋಜಿಸಿ ಬಾಂಬ್ ದಾಳಿಗೆ ಗುರಿಯಾದವರ ನೆರವಿಗೆ ಧಾವಿಸುತ್ತಿದ್ದರು.

**ಗೆರಿಲ್ಲಾ ರೆಜಿಮೆಂಟು**

ಜನವರಿ 20ರಂದು ಮೇಜರ್ ಪ್ರೇಂ ಸೆಹಗಲ್‌ರವರು INA ಸುಪ್ರೀಂ ಕಮ್ಯಾಂಡ್‌ನ ಮೊದಲ ತಂಡದೊಂದಿಗೆ ಬಂದಿಳಿದರು. ಆಗಿನ ಪರಿಸ್ಥಿತಿಯ ಬಗ್ಗೆ ಅವರಿಗೆ ಏನೇನೂ ಸಮಾಧಾನವಿರಲಿಲ್ಲ. ಇದಕ್ಕೆ ಮುಖ್ಯ ಕಾರಣ - ಜಪಾನೀಯರ ನಡವಳಿಕೆ. ನಮ್ಮ ಪಡೆಗಳಿಗೆ ಸಾರಿಗೆ ವ್ಯವಸ್ಥೆ ಮಾಡುವ ಬದಲು ಅವರು ಬರೀ ಕಿರಿಕಿರಿಯನ್ನೇ ಉಂಟು ಮಾಡುತ್ತಿದ್ದರು. ಈ ರೀತಿಯ ಸಮಸ್ಯೆಗಳು ಬಗೆಹರಿದಿದ್ದು ನೇತಾಜೀಯವರು ಉನ್ನತ ವಲಯದವರೊಂದಿಗೆ ಮಾತುಕತೆ ನಡೆದ ನಂತರವೇ.

ಜನವರಿ 26ರಂದು ಒಂದು ದೊಡ್ಡ ರ್‍ಯಾಲಿ ನಡೆಯಿತು. ನಂ.1 ಗೆರಿಲ್ಲಾ ರೆಜಿಮೆಂಟು ಮತ್ತು ಇತರ ಘಟಕಗಳ ಮೊದಲ ತಂಡಗಳ ಈ ರ್‍ಯಾಲಿಯಲ್ಲಿ INA ಯನ್ನು ಪ್ರತಿನಿಧಿಸಿದವು. ಇಲ್ಲಿ ಭಾರತೀಯರ ದೊಡ್ಡ ಗುಂಪೇ ನೆರೆದಿತ್ತು. ಗಂಡಸರು, ಹೆಂಗಸರು ಮತ್ತು ಮಕ್ಕಳಾದಿಯಾಗಿ ಎಲ್ಲರೂ ಭಾಗವಹಿಸಿದ್ದ ಈ ಕೂಟದಲ್ಲಿದ್ದ ಶಿಸ್ತು, ಸಂಯಮ ಬರ್ಮಾ ದೇಶದ ಅಧಿಕಾರಿಗಳನ್ನು ವಿಸ್ಮಯಗೊಳಿಸಿತು. ಅವರಿಗದೊಂದು ಪಾಠ!

1944ರ ಫೆಬ್ರವರಿಯ ಆರಂಭದಲ್ಲಿ ಕರ್ನಲ್ ಷಾ ನವಾಜ್ ಖಾನ್ ನೇತೃತ್ವದ ನಂ.1 ಗೆರಿಲ್ಲಾ ರೆಜಿಮೆಂಟ್ ಮುಂಚೂಣಿಗೆ ತೆರಳಿತ್ತು. ಅದಕ್ಕೆ ಮುಂಚೆ ಮಿಂಗ್ಲಿಡಾನ್ ಮೈದಾನದಲ್ಲಿ ಸೇರಿದ್ದ ಈ ರೆಜಿಮೆಂಟನ್ನು ಉದ್ದೇಶಿಸಿ ನೇತಾಜಿಯವರು ಮಾತನಾಡಿದರು. ಆಕ್ರಮಣಕ್ಕೆ ಹೋಗಲಿರುವ ಮೊದಲ ಪಡೆಯಾದ್ದರಿಂದ ಎಲ್ಲವೂ ಅವರ ಸಾಮರ್ಥ್ಯವನ್ನೇ ಅವಲಂಬಿಸಿರುತ್ತದೆ ಎಂದವರು ಹೇಳಿದರು. ಸಾಧ್ಯವಾದಷ್ಟು ಮಟ್ಟಿಗೆ ಬ್ರಿಟಿಷರು INA ವಿರುದ್ಧ ಹೋರಾಡಲು ತಮ್ಮ ಸೇನೆಯಲ್ಲಿ ಭರ್ತಿಯಾಗಿರುವ ಭಾರತೀಯ ಸೈನಿಕರನ್ನೇ ಬಳಸುತ್ತಾರೆ ಎಂಬ ಎಚ್ಚರಿಕೆಯ ಮಾತನ್ನೂ ಅವರು ಹೇಳಿದರು. ಈ ಭಾರತೀಯ ಪಡೆಗಳಲ್ಲಿ ತಮ್ಮ ಕುಟುಂಬದವರೇ ಇರಬಹುದು. ತಮ್ಮ ಗ್ರಾಮದ ಮಂದಿಯೇ ಇರಬಹುದು. ಒಟ್ಟಿನಲ್ಲಿ INA ಯ ಯೋಧರು ತಮ್ಮ ಬಂಧು-ಬಾಂಧವರೊಡನೆಯೇ ಕಾದಾಡಬೇಕಾಗಿ ಬರಬಹುದೆಂದು ಅವರು ಹೇಳಿದರು. ಅತ್ತ ಬ್ರಿಟಿಷರು ಕುಯುಕ್ತಿಯಿಂದ ಭಾರತೀಯ ಸೈನಿಕರಲ್ಲಿ INA ಸಂಪೂರ್ಣವಾಗಿ ಜಪಾನೀಯರ ಸುಪರ್ದಿನಲ್ಲಿರುವ ಸೇನೆ; ಭಾರತವನ್ನು ಆಕ್ರಮಿಸು-ವುದೇ ಜಪಾನಿನ ಉದ್ದೇಶ ಎಂಬ ಭಾವನೆ ಬಿತ್ತಿದ್ದರು. ಇದು ಬ್ರಿಟಿಷರ ಅಪಪ್ರಚಾರ ಎಂಬುದನ್ನು INA ಯ ಯೋಧರು ಯುದ್ಧಭೂಮಿಯಲ್ಲೇ ನಿರೂಪಿಸಬೇಕು. ತಮ್ಮ ಸೆರೆಯಾಳು-ಗಳಾಗಬಹುದಾದ ಸೈನಿಕರಿಗೆ ತಮ್ಮ ಧ್ಯೇಯವನ್ನು ಮನವರಿಕೆ ಮಾಡಿಕೊಡಬೇಕು ಎಂದೂ ನೇತಾಜಿಯವರು ಹೇಳಿದರು. ಒಂದು ವೇಳೆ INA ಯ ಸೈನಿಕರೇ ಸೆರೆಯಾಳುಗಳಾಗುವ ಸಂದರ್ಭ ಒದಗಿ ಬಂದಲ್ಲಿ ತಾವು ಭಾರತದ ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿರುವ ಕ್ರಾಂತಿಕಾರೀ ಸೇನೆಯ ಸದಸ್ಯರು; ಮಾತೃಭೂಮಿಗೆ ಮಾತ್ರ ತಾವು ಋಣಿಗಳು ಎಂಬುದನ್ನು ನೆನಪಿನಲ್ಲಿ ಇಟ್ಟುಕೊಂಡು ಧೈರ್ಯದಿಂದ ತಮ್ಮ ಗೌರವ ಘನತೆಗಳನ್ನು ಕಾಪಾಡಿಕೊಳ್ಳಬೇಕೆಂಬ ಕರೆಯಿತ್ತರು.

ಅದೇ ವಾರದ ಕೊನೆಯಲ್ಲಿ ನಮಗೊಂದು ಗೆಲುವಿನ ಸುದ್ದಿ ಬಂದಿತು. ಬಹಾದ್ದೂರ್ ಗುಂಪು, INA ಯ ಸಣ್ಣದೊಂದು ತುಕಡಿ ಅರಾಕೊನ್ ಕ್ಷೇತ್ರದಲ್ಲಿ ಜಪಾನೀಯರೊಡಗೂಡಿ ಹೋರಾಡುತ್ತಾ ಬ್ರಿಟಿಷ್ ಸೇನೆಯನ್ನು ಹಿಮ್ಮೆಟ್ಟಿಸಿ ನಿಧಾನವಾಗಿ ಮುಂದು-ವರಿಯುತ್ತಿತ್ತು. ಇದು ನಮ್ಮ ಪ್ರಥಮ ಆಕ್ರಮಣವಾದ್ದರಿಂದ ಸಹಜವಾಗಿಯೇ ನಮ್ಮ ಹುರುಪು ಹೆಚ್ಚಿತು. "INA ಯ ಮಾತು ಅಂದರೆ ಮಾತು; ಇವರು ಬ್ರಿಟಿಷರತ್ತ ವಾಲುವವರೂ ಅಲ್ಲ" ಎಂದು ಜಪಾನಿಯರಿಗೂ INAಯ ಮೇಲೆ ವಿಶ್ವಾಸ ಮೂಡಿತು. ಮಾರ್ಚ್ 12ರಂದು INAಯ ಕೆಲ ಯೋಧರು ಭಾರತದ ನೆಲದ ಮೇಲೂ ಕಾಲಿಟ್ಟರು. ಆದರೆ ಆ ಸಮಯದಲ್ಲಿ ಸೂಕ್ತಬೆಂಬಲ ಸಿಗದೆ, ಅಲ್ಲಿಂದ ಹಿಂತೆರಳಬೇಕಾಯಿತು. ಅರೆಕಾನ್‌ನಲ್ಲಿ ದೊರೆತ ಈ ಗೆಲುವಿಗಾಗಿ

ನೇತಾಜಿಯವರನ್ನು ಅಭಿನಂದಿಸಲು ಇಂಪೀರಿಯಲ್ ಜಪಾನೀ ಸೇನೆಯ ವರಿಷ್ಠ ಅಧಿಕಾರಿಯೊಬ್ಬರು ಖುದ್ದಾಗಿ ಬಂದರು. ಜಪಾನೀಯರ ಬಿಗುಮಾನ ಈಗ ಕರಗಿತ್ತು; ಅವರು ಈಗ ಹೆಚ್ಚು ಸೌಹಾರ್ದಯುತರಾಗಿದ್ದರು. ಸಹಕಾರ ತೋರಿದರು.

★ ★ ★

ಫೆಬ್ರವರಿ 29ರಂದು ನೇತಾಜಿಯವರು ಮೇಮ್ಯೋಗೆ ತೆರಳಿದರು. ಮೇಮ್ಯೋವಿನಲ್ಲಿ ಜಪಾನೀ ಹೈಕಮ್ಯಾಂಡ್‌ನ ಪ್ರಧಾನ ಕಛೇರಿಯಿತ್ತು. ತಮ್ಮ ಮುಖ್ಯ ಕಛೇರಿಯೂ ಇಲ್ಲೇ ಇರಬೇಕೆಂದು ನೇತಾಜಿಯವರು ಬಯಸಿದ್ದರು. ಅದೇ ಸಮಯದಲ್ಲಿ ನಂ.1 ಗೆರಿಲ್ಲಾ ರೆಜಿಮೆಂಟ್ ಮುಂಚೂಣಿಯಲ್ಲಿತ್ತು ಹಾಗೂ ನಂ.2ರ ತುಕಡಿ ನಿಧಾನವಾಗಿ ಅದೇ ದಿಕ್ಕಿನೆಡೆಗೆ ಮುಂದುವರಿಯುತ್ತಿತ್ತು. ಆ ಸಮಯದಲ್ಲಿ ತಾವೂ ಅವುಗಳ ಹತ್ತಿರವೇ ಇರಬೇಕೆಂದು ಬಯಸಿ ನೇತಾಜಿಯವರು ರಂಗೂನಿಗೆ ಮಾರ್ಚ್ 1ರಂದು ಮರಳಿ ಬಂದರು. ಅದೇ ಸಮಯದಲ್ಲಿ ಪೂನಾದ ಆಗಾಖಾನ್ ಅರಮನೆಯಲ್ಲಿ ಖೈದಿಯಾಗಿದ್ದ ಕಸ್ತೂರಬಾ ಗಾಂಧಿಯವರು ತೀರಿಕೊಂಡ ವರ್ತಮಾನ ನಮಗೆ ತಲುಪಿತು. ಅದೇ ಸಂಜೆ ಮೊದಲು ನೇತಾಜಿ, ನಂತರ ನಾನು, ಭಾರತವನ್ನು ಉದ್ದೇಶಿಸಿ ರೇಡಿಯೋವಿನಲ್ಲಿ ಮಾತನಾಡಿದೆವು. ಅದೊಂದು ಭಾವನಾತ್ಮಕ ಭಾಷಣವಾಗಿತ್ತು.

ಮಾರ್ಚ್ 7ರಂದು, ಅಂದರೆ ಸಿಂಗಪುರದಿಂದ ಬಂದ ಎರಡು ತಿಂಗಳುಗಳ ನಂತರ ನಾನು ಮತ್ತೆ ಸಿಂಗಪುರಕ್ಕೆ ಹೋದೆ. ನಮ್ಮ ಸಂಘದಲ್ಲಿ ಅಲ್ಲಿ ಆಗ ಯೋಧರ ಸಂಖ್ಯೆ 400 ಹಾಗೂ ದಾದಿಯರ ಸಂಖ್ಯೆ 100ರಷ್ಟಿತ್ತು. ನಮ್ಮಲ್ಲಿ ಶಿಸ್ತಿನ ವಿಷಯದಲ್ಲಿ ಅತಿ ಕಟ್ಟುನಿಟ್ಟು. ಅಲ್ಲಿಂದ ಎಂಟುಮಂದಿ ಅಧಿಕಾರಿಗಳು, ಹನ್ನೆರಡು ಮಂದಿ NCOಗಳು, ತುಕಡಿಯ ವಿವಿಧ ಹುದ್ದೆಗಳಿಂದ 80 ಮಂದಿ ಮತ್ತು ಹದಿನೈದು ಮಂದಿ ದಾದಿಯರನ್ನು ಬರ್ಮಾಗೆ ಕಳಿಸಲು ಸಿದ್ಧತೆಗಳು ನಡೆಯುತ್ತಿದ್ದವು. ಬರ್ಮಾದಲ್ಲಿ ಬಟ್ಟೆಬರೆ ಮತ್ತು ಷೂ ಮುಂತಾದುವುಗಳಿಗೆ ಹೆಚ್ಚೂಕಮ್ಮಿ 'ಬರ'ವೇ ಇದೆಯೆಂಬ ವರ್ತಮಾನ ಬಂದಿತ್ತಾದ್ದರಿಂದ ರಂಗೂನ್ ಶಿಬಿರದ ಸಿಪಾಯಿಗಳಿಗೆ ಹೆಚ್ಚುವರಿ ಸರಕನ್ನು ಕಳಿಸಬೇಕಾಗಿ ಬಂತು. ನಮ್ಮ ತಂಡ ಬರ್ಮಾಕ್ಕೆ ರಸ್ತೆ ಮೂಲಕವೇ ಹೋಗಬೇಕಾಗಿತ್ತು. ಮುಖ್ಯವಾಗಿ ಥಾಯ್ಲೆಂಡ್-ರಂಗೂನಿನ ರೈಲುಮಾರ್ಗದ ಮೂಲಕ ಹಾಗೂ ಆಗಾಗ್ಗೆ ಕಾಲ್ನಡಿಗೆಯಲ್ಲಿ ಪ್ರಯಾಣ. ಈ ದೀರ್ಘ ಪ್ರಯಾಣಕ್ಕೆ ಸಾಕಾಗುವಷ್ಟು ಆಹಾರ ಸಾಮಗ್ರಿ ಮತ್ತು ಔಷಧಿಗಳನ್ನು ಅವರು ಕೊಂಡೊಯ್ಯಬೇಕಿತ್ತು. ಜೊತೆಗೆ ಮಲೇರಿಯಾ ಮತ್ತು ಆಮಶಂಕೆಯ ಭೀತಿ ಬೇರೆ. ಅವುಗಳ ಔಷಧಿಗಳ 'ಅಸಲೀತನ'ದ ಬಗ್ಗೆಯೂ ನಾನು ಅತ್ಯಂತ ಜಾಗರೂಕಳಾಗಿರಬೇಕಾಗಿತ್ತು ಹಾಗೂ ಅವುಗಳ ದಾಸ್ತಾನಿನ ಬಗ್ಗೆಯೂ ನಿಗಾ ಇಡಬೇಕಾಗಿತ್ತು.

ಮಾರ್ಚ್ 30 - ನನ್ನ ಅತ್ಯಂತ ಹೆಮ್ಮೆಯ ದಿನ ಎಂದು ಹೇಳಬಹುದು. ಅದು ನಾನು ರಾಣಿ ಝಾನ್ಸಿ ರೆಜಿಮೆಂಟಿನ 'ಅಧಿಕಾರಿ'ಯಾಗಿ ಪೆರೇಡ್ ಮಾಡಿದ ದಿನ. ನಾವು ಎಂಟು ಮಂದಿ ಯುವತಿಯರು ಅಧಿಕಾರಿಗಳ ತರಬೇತಿ ಶಾಲೆಯಲ್ಲಿ ಯುವಕರಿಗೆ ಒಡ್ಡುವ ಲಿಖಿತ ಮತ್ತು ಪ್ರಾಯೋಗಿಕ ಪರೀಕ್ಷೆಗಳನ್ನು ಎದುರಿಸಿ, ಪಾಸುಮಾಡಿ, ಅಂದು INAಗೆ ಅಧಿಕಾರಿಗಳಾಗಿ ಸೇರ್ಪಡೆಯಾದೆವು. ಆಗ ನೇತಾಜಿ ಮತ್ತು ಕರ್ನಲ್ ಭೋನ್ಸಾಲೆ ಬರ್ಮಾದಲ್ಲಿದ್ದುದರಿಂದ ಹಂಗಾಮಿ ಮುಖ್ಯಸ್ಥರಾಗಿದ್ದ ಕರ್ನಲ್ ನಗರ್‌ರವರು ಪೆರೇಡ್‌ನಲ್ಲಿ ವಂದನೆ ಸ್ವೀಕರಿಸಿದರು. ನಮ್ಮನ್ನು ವಿವಿಧ ತುಕಡಿಗಳು ಹಾಗೂ ಕಂಪೆನಿಗಳನ್ನಾಗಿ ವಿಂಗಡಿಸಿ, ಒಂದೊಂದು ಘಟಕಕ್ಕೂ ಅದೇ ಘಟಕದಿಂದ NCO ಮತ್ತು ಅಧಿಕಾರಿಗಳ ನೇಮಕಾತಿ ಮಾಡಿದರು. ಅಲ್ಲಿಗೆ ಸಿಂಗಪುರದಲ್ಲಿ ನನ್ನ ಕೆಲಸ ಮುಗಿಯಿತು. ನಾನು ಬರ್ಮಾಗೆ ಮತ್ತು ಮುಂಚೂಣಿಗೆ ಹೋಗಬಹುದಾಗಿತ್ತು.

ರಂಗೂನಿನತ್ತ ಪಯಣ

ಏಪ್ರಿಲ್ 5ರಂದು ನಾನು ಸಿಂಗಪುರದಿಂದ ರಂಗೂನಿಗೆ ಹೊರಟೆ. ಸಿಂಗಪುರಕ್ಕೆ ಅದೇ ನನ್ನ ಕೊನೆಯ ಭೇಟಿಯಾಯಿತು. ಅದನ್ನು ಬಿಟ್ಟುಹೋಗಲು ನನಗ್ಯಾವ ಬೇಸರವೂ ಇರಲಿಲ್ಲ. ನನ್ನ ಗಮನವೆಲ್ಲಾ ಮುಖ್ಯವಾಗಿ ಮುಂದಾಗಬೇಕಿದ್ದ ಕೆಲಸಗಳ ಮೇಲೆಯೇ ಇತ್ತು. ಬ್ಯಾಂಕಾಕಿನಲ್ಲಿ ಒಂದು ರಾತ್ರಿ ತಂಗಿ ರಂಗೂನನ್ನು ತಲುಪಿದಾಗ ನಮ್ಮ ರೆಜಿಮೆಂಟಿನ ಮೊದಲ ಪಡೆ ಮೇಮ್ಯೋವಿನಲ್ಲಿದೆಯೆಂದು ತಿಳಿಯಿತು. ನಮ್ಮ ಶಿಬಿರಗಳು ಇನ್ನೂ ತಯಾರಿರಲಿಲ್ಲವಾದ್ದರಿಂದ ಮಿಕ್ಕವರಿಗೆಲ್ಲಾ ತಾತ್ಕಾಲಿಕವಾಗಿ ಹಳೆಯ ಕಟ್ಟಡವೊಂದರಲ್ಲಿ ಇಳಿದು ಕೊಳ್ಳಲು ವ್ಯವಸ್ಥೆ ಮಾಡಲಾಯಿತು. ಮಹಿಳಾ ಕಮಿಟಿಯವರಂತೂ ಮೈಮುರಿದು ದುಡಿಯುತ್ತಿದ್ದರು. ಕೆಲವರು ರಂಗೂನಿನ INAಯ ಬೇಸ್ ಆಸ್ಪತ್ರೆಯಲ್ಲಿ ಸಹಾಯಕ ದಾದಿಗಳಾಗಿ ಕೆಲಸ ಮಾಡುತ್ತಿದ್ದರು.

ಏಪ್ರಿಲ್ 15ರಂದು ರಾಣಿ ಝಾನ್ಸಿ ರೆಜಿಮೆಂಟಿನ ಇಬ್ಬರು ಅಧಿಕಾರಿಗಳು ಮತ್ತು ಇತರ ಹತ್ತು ಮಂದಿಯ ತಂಡದೊಂದಿಗೆ ನಾನು ಮೇಮ್ಯೋಗೆ ಸೇನೆಯ ಟ್ರಕ್ ಒಂದರಲ್ಲಿ ಪ್ರಯಾಣ ಬೆಳೆಸಿದೆ. ಆಗ ಶತ್ರುಪಡೆಗಳ ವೈಮಾನಿಕ ಚಟುವಟಿಕೆ ಬಿರುಸಾಗಿದ್ದರಿಂದ ನಾವು ರಕ್ಷಣಾ ಪಡೆಗಳ ಜೊತೆ ಹಗಲು ಹೊತ್ತೇ ಪ್ರಯಾಣ ಮಾಡಬೇಕೆಂದೂ, ರಸ್ತೆಯಲ್ಲಿ ಹಾದು ಹೋಗುವ ಟ್ರಕ್‌ಗಳ ಮೇಲೂ ಗಮನವಿರಬೇಕೆಂದೂ ನಮಗೆ ಜಪಾನೀ ಕಮ್ಯಾಂಡ್‌ನಿಂದ ಆದೇಶವಿತ್ತು. ಅಂತೆಯೇ ನಾವು ಹಗಲು ಪ್ರಯಾಣ ಮಾಡಿ ರಾತ್ರಿ ಯಾವುದಾದರೂ ಹಳ್ಳಿಗಳಲ್ಲಿ ಉಳಿದುಕೊಳ್ಳುತ್ತಿದ್ದೆವು.

ಈ ಹಳ್ಳಿಗಳಲ್ಲಿಯೂ ಭಾರತೀಯ ಕುಟುಂಬಗಳ ಸಂಖ್ಯೆ ಸಾಕಷ್ಟಿತ್ತು. ಆದ್ದರಿಂದ ನಮಗಿಲ್ಲಿ ಆದರದ ಸ್ವಾಗತವೂ ದೊರಕುತ್ತಿತ್ತು. ಇವರೆಲ್ಲಾ ಬ್ರಿಟಿಷರು ಹಿಮ್ಮೆಟ್ಟಿದ ನಂತರ ಕ್ರುದ್ಧ

ಬರ್ಮೀಯರ ಕೋಪತಾಪಕ್ಕೆ ಬಲಿಯಾದವರಾಗಿದ್ದರು. ಭಾರತೀಯ ಜಮೀನ್ದಾರರುಗಳು ಬರ್ಮಾದಲ್ಲಿ ಲೇವಾದೇವಿ ವ್ಯವಹಾರಗಳನ್ನು ನಡೆಸುತ್ತಿದ್ದರು. ನೀರಿನಂತೆ ಹಣ ವ್ಯಯಿಸುತ್ತಿದ್ದ ಬರ್ಮೀಯರಿಗೆ ಈ ಜಮೀನ್ದಾರರು ಹಣ ಒದಗಿಸಿ ಒದಗಿಸಿ, ಅವರು ಅದನ್ನು ಹಿಂತಿರುಗಿಸದಿದ್ದಾಗ ಅವರ ಫಲವತ್ತಾದ ಹೊಲಗದ್ದೆಗಳನ್ನು 'ಗುಳುಂ' ಮಾಡಿಕೊಂಡರು. ಯುದ್ಧದ ವಾಸನೆ ಬರುತ್ತಿದ್ದಂತೆಯೇ ಈ ಶ್ರೀಮಂತ ಕುಳಗಳು ಆಸ್ತಿಪಾಸ್ತಿ ಭೂಮಿಕಾಣಿ ಬಿಟ್ಟು ಪಲಾಯನ ಹೊಂದಿದರು. ಇನ್ನು ಅಲ್ಲಿ ಉಳಿದುಕೊಂಡ ಭಾರತೀಯರೆಂದರೆ ಹೊಲಗದ್ದೆಗಳಲ್ಲಿ ಕೂಲಿನಾಲಿ ಮಾಡುತ್ತಿದ್ದವರು, ಚಿಲ್ಲರೆ ಅಂಗಡಿ ಇಟ್ಟುಕೊಂಡವರು, ಸಣ್ಣಪುಟ್ಟ ವ್ಯಾಪಾರ ಮಾಡುತ್ತಿದ್ದವರು. ಸರಿ, ಬರ್ಮೀಯರ ಕೋಪಕ್ಕೆ ಇವರೇ ಬಲಿಯೂ ಆದರು. ಆದರೆ ನೇತಾಜಿಯವರ ಆಗಮನದಿಂದ ಅಲ್ಲಿ ಪ್ರಾಂತ್ಯ ಸರ್ಕಾರದ ಸ್ಥಾಪನೆ-ಯಿಂದ ಇವರೆಲ್ಲರ ಸ್ಥಿತಿಗತಿ ಸುಧಾರಿಸಿತು. ಸಮಯ ಬಂದಲ್ಲಿ ಅವರ ರಕ್ಷಣೆಗಾಗಿ INA ಯನ್ನು ಕಳಿಸಿಕೊಡುವುದಾಗಿ ನೇತಾಜಿಯವರು ಅವರಿಗೆ ಆಶ್ವಾಸನೆಯನ್ನೂ ಇತ್ತರು, ಅಂತೆಯೇ ಅದನ್ನು ಉಳಿಸಿಕೊಂಡರು.

ನಾವು ಮೇಮ್ಯೋವನ್ನು ಏಪ್ರಿಲ್ 19ರಂದು ತಲುಪಿದೆವು. ನಮ್ಮ ವಸತಿಗೆ ಖಾತಿ ಇದ್ದ ಶಾಲೆಯೊಂದರಲ್ಲಿ ವ್ಯವಸ್ಥೆ ಮಾಡಲಾಗಿತ್ತು. ಪಕ್ಕದಲ್ಲೇ ವಿಶಾಲವಾದ ಮೈದಾನವೂ ಇತ್ತು. ಮೇಮ್ಯೋ ಹಳೆಯ ಸರ್ಕಾರದ ಬೇಸಗೆಯ ರಾಜಧಾನಿಯಾಗಿತ್ತು. ನಾವು ಮೇಮ್ಯೋವಿಗೆ ಬಂದ ತಕ್ಷಣವೇ ನೇತಾಜಿಯವರು ಆ ಪ್ರದೇಶದ ಜಪಾನೀ ಪಡೆಗಳ ಕಮ್ಯಾಂಡರ್ ಆಗಿದ್ದ ಜನರಲ್ ಮಟಕುಚಿಯವರನ್ನು ನೋಡಲು ಹೋದರು. ಅವರ ಜೊತೆ ನಾನೂ ಹೋಗಿದ್ದೆ.

### ಆಜಾದ್ ಹಿಂದ್ ಫೌಜ್

ಏಪ್ರಿಲ್ 21ರಂದು ಮೇಮ್ಯೋವಿನಲ್ಲಿ ಒಂದು ಭಾರೀ ಸಭೆ ನಡೆಯಿತು. ಇದರಲ್ಲಿ ಅಲ್ಲಿದ್ದ INA ಎಲ್ಲಾ ಘಟಕಗಳು, ರಾಣಿ ಝಾನ್ಸಿ ರೆಜಿಮೆಂಟು, ಸ್ಥಳೀಯ ಭಾರತೀಯರು ಮತ್ತು ಆಜಾದ್ ಹಿಂದ್ ದಳದ ಸದಸ್ಯರುಗಳು ಭಾಗವಹಿಸಿದ್ದರು. ಆಜಾದ್ ಹಿಂದ್ ದಳದ ಬಗ್ಗೆ ಇಲ್ಲಿ ಮೊದಲ ಬಾರಿಗೆ ಉಲ್ಲೇಖಿಸುತ್ತಿದ್ದೇನೆ. ಇದೊಂದು ನಾಗರಿಕರ ಸಂಘವಾಗಿತ್ತು. ಇದರ ಸದಸ್ಯರು ಮಲಯ ಮತ್ತು ಬರ್ಮಾ ಸರ್ಕಾರಗಳಲ್ಲಿ ಒಳ್ಳೆಯ ಹುದ್ದೆಗಳಲ್ಲಿದ್ದವರು. ಆದರೆ ಈಗ ತಮ್ಮ ಹುದ್ದೆಗಳನ್ನು ತ್ಯಜಿಸಿ, ಭಾರತದ ವಿಮೋಚಿತ ಪ್ರದೇಶಗಳಲ್ಲಿ ಅಂತಹುದೇ ಹುದ್ದೆಗಳನ್ನು ಅಲಂಕರಿಸಲು ಸನ್ನದ್ಧರಾಗಿದ್ದರು. ಅಂದು ನಾವು ಮೊದಲ ಬಾರಿಗೆ ಹಗಲಿನಲ್ಲೇ ವೈಮಾನಿಕ ದಾಳಿಯನ್ನು ಎದುರಿಸಿದೆವು.

ನಮ್ಮಲ್ಲಿಯೇ ನಿರೋಧಕ ಅಸ್ತ್ರಗಳಿರಲಿಲ್ಲ. ಆದ್ದರಿಂದ ಆ ಬಾಂಬರ್ ವಿಮಾನಗಳು ತೀರಾ ಕೆಳಗಡೆಯೇ ಹಾರಾಡಿ, ತಮ್ಮ ಅಸ್ತ್ರಶಸ್ತ್ರಗಳನ್ನು ಪ್ರಯೋಗಿಸಿ ಹೋದವು. ಅದೃಷ್ಟವಶಾತ್, ಸಕಾಲದಲ್ಲಿ ನಾವು ಆಶ್ರಯತಾಣಗಳನ್ನು ಸೇರಿಕೊಂಡೆವಾದ್ದರಿಂದ ನಮ್ಮಲ್ಲಿ ಯಾವ ಸಾವುನೋವು ಉಂಟಾಗಲಿಲ್ಲ.

ಮೇ 1 ರಂದು ಸಾಯಂಕಾಲ ರಾಣಿ ಝಾನ್ಸಿ ರೆಜಿಮೆಂಟಿನ ಶಿಬಿರದಲ್ಲಿ ಒಂದು ವಿಶೇಷ ಔತಣಕೂಟ ಏರ್ಪಾಡಾಗಿತ್ತು. ಇಡೀ INA ಮತ್ತು ನಾಗರಿಕ ಸಮಿತಿಗಳವರೂ ಪಾಲ್ಗೊಂಡಿದ್ದ ಈ ಕೂಟದ ಆಹ್ವಾನಿತರು ಸಿಪಾಯಿಗಳು, ಆಹ್ವಾನಿಸಿದ್ದವರು ನೇತಾಜಿ ಹಾಗೂ ಇತರ ಅಧಿಕಾರಿಗಳು. ಸೂರ್ಯ ಮುಳುಗುತ್ತಿದ್ದಂತೆಯೇ ಊಟವೂ ಮುಗಿಯಿತು. ಪಡೆಗಳು ತಂತಮ್ಮ ಶಿಬಿರಗಳಿಗೆ ತೆರಳಿದವು. ಚಂದ್ರನೂ ಅದೇ ತಾನೆ ಆಕಾಶದಲ್ಲಿ ಕಾಣಿಸಿಕೊಂಡ. ಅವನೊಟ್ಟಿಗೇ ಒಂದು ಕ್ಷಣ ಬೆಳ್ಳಿಯ ಬೆಳಕೋ ಎಂಬ ಭ್ರಾಂತಿ ಉಂಟು ಮಾಡುವಂತೆ ಬಾಂಬರ್-ಗಳು ದಾಳಿ ಆರಂಭಿಸಿದವು. ಆಗಲೂ ಅಷ್ಟೆ, ಆಶ್ರಯ- ತಾಣಗಳಲ್ಲಿ ತಲೆ ಮರೆಸಿಕೊಳ್ಳುವಷ್ಟು ಸಮಯವಿತ್ತು. ಸದ್ಯ, ಸಾವು ನೋವೂ ಏನೂ ಸಂಭವಿಸಲಿಲ್ಲ. ನಮ್ಮ ಶಿಬಿರ ಮಾತ್ರ ಭಗ್ನವಾಗಿತ್ತು. ಸ್ವಲ್ಪ ಹೊತ್ತಿನಲ್ಲೇ 'ಎಲ್ಲಾ ಸರಿಯಿದೆ' ಎಂಬ ಸಂದೇಶದ ಗಂಟೆಯೂ ಮೊಳಗಿತು. ಕೂಡಲೆ ನೇತಾಜಿಯವರೂ ತಮ್ಮ ತಂಡದೊಂದಿಗೆ ಬಂದರು. ಹತ್ತಿರದಲ್ಲೇ, ಕೊಂಚ ಮರೆಯಾಗಿದ್ದ ಮತ್ತೊಂದು ಶಾಲಾ ಕಟ್ಟಡಕ್ಕೆ ನಮ್ಮನ್ನು ಸ್ಥಳಾಂತರಿಸಲು ಸೂಕ್ತ ವ್ಯವಸ್ಥೆ ಮಾಡಿದರು. ಮರುದಿನ ಬೆಳಿಗ್ಗೆ ನಾವು ವಾಪಸ್ಸು ಹೋಗಿ ನಮ್ಮದೇನೇನು ಸಾಮಾನು ಇದೆ - ನಾಶವಾಗಿದೆ ಎಂದು ತಪಾಸಣೆ ನಡೆಸಿದೆವು. ಅದೃಷ್ಟ ಚೆನ್ನಾಗಿತ್ತು, ಆಹಾರದ ದಾಸ್ತಾನಿಗೆ ಯಾವ ನಷ್ಟವೂ ಸಂಭವಿಸಿರಲಿಲ್ಲ. ಆದರೆ ನಾವು ತೊಟ್ಟಿದ್ದ ಬಟ್ಟೆಯನ್ನು ಹೊರತುಪಡಿಸಿ ಮಿಕ್ಕ ಬಟ್ಟೆಗಳೆಲ್ಲಾ ಚೂರುಚೂರಾಗಿದ್ದವು.

### ದ್ವೀಪದಿಂದ ದ್ವೀಪಕ್ಕೆ!

ಬರ್ಮಾ ಯುದ್ಧದಲ್ಲಿ ಇದೊಂದು ಮಹತ್ವದ ಘಟ್ಟವೆಂದು ಎಂದು ನನ್ನ ಅನಿಸಿಕೆ. ಜಪಾನಿನ ವಿರುದ್ಧ ಸಮರ ಸಾರಿದ ಮಿತ್ರರಾಷ್ಟ್ರಗಳು ಜನರಲ್ ಮ್ಯಾಕ್ ಆರ್ಥರ್‌ನ 'ದ್ವೀಪದಿಂದ ದ್ವೀಪಕ್ಕೆ' ತಂತ್ರವನ್ನು ಅಳವಡಿಸಿಕೊಂಡವು. ಇದರ ಪ್ರಕಾರ, ಅವರ ದಾಳಿಯ ಕೊನೆಯ ಹಂತದಲ್ಲಿ ದಾಳಿಯು ಜಪಾನ್‌ದೇಶದ ಮೇಲೆಯೇ ಕೇಂದ್ರೀಕೃತ-ಗೊಳ್ಳುತ್ತಿತ್ತು. ಇದನ್ನು ಮೊದಲೇ ಗ್ರಹಿಸಿದ ಜಪಾನಿಯರು ತಮ್ಮೆಲ್ಲಾ ವೈಮಾನಿಕ ಬಲಗಳನ್ನು - ಫೈಟರ್ ಮತ್ತು ಬಾಂಬರ್‌ಗಳನ್ನು ಆಕ್ರಮಣಕಾರರನ್ನು ಹಿಮ್ಮೆಟ್ಟಿಸಲು ಹಾಗೂ ತಮ್ಮ ನೌಕಾಮಾರ್ಗ ಮತ್ತು ನೆಲೆಗಳ ರಕ್ಷಣೆಗೆ ಮೀಸಲಾಗಿಡಬಯಸಿದರು. ಇದಕ್ಕಾಗಿ ಬರ್ಮಾದಿಂದ ತಮ್ಮ ವೈಮಾನಿಕ ಪಡೆಗಳನ್ನು ಹಿಂತೆಗೆದುಕೊಂಡರು. ಹಾಗೂ ಅಲ್ಲಿ ತಮ್ಮ ಪಡೆಗಳ ಬಲವನ್ನು ಕಡಿಮೆಮಾಡಿ, ಅವನ್ನು ಕೇವಲ ರಕ್ಷಣಾತ್ಮಕ ಕೆಲಸಗಳಿಗೆ ಸೀಮಿತಗೊಳಿಸಿದರು. ಇಂಫಾಲ ನಮ್ಮ ಕೈವಶವಾಗಿರಲಿಲ್ಲ. ಅದೇನಾದರೂ ನಮ್ಮ ಕೈವಶವಾದರೆ, ಬ್ರಹ್ಮಪುತ್ರ-

ದವರೆಗೆ ನಮ್ಮನ್ನು ತಡೆಯಲು ಸಾಧ್ಯವೇ ಇಲ್ಲ ಎಂಬುದು ಬ್ರಿಟಿಷರಿಗೆ ಗೊತ್ತಿತ್ತು. ಇಂಫಾಲದಲ್ಲಿದ್ದ ಅವರ ದಂಡು ಈಗಲೋ ಆಗಲೋ ಶರಣಾಗುವ ಸ್ಥಿತಿ ಬೇರೆ ತಲುಪಿತ್ತು. ಕೂಡಲೆ ಬ್ರಿಟಿಷರು ಅತ್ಯಂತ ಚುರುಕಾಗಿ 24 ಗಂಟೆಗಳೊಳಗಾಗಿ ಸೇನೆಯ ತುಕಡಿಯೊಂದನ್ನು ವಿಮಾನದ ಮೂಲಕ ತರಿಸಿಕೊಂಡು ಇಂಫಾಲದ ತುಕಡಿಯನ್ನು ಬಲಪಡಿಸಿದರು. ನಮಗೆ ಇದರ ಅರಿವೇ ಆಗಲಿಲ್ಲ. "ಓ, ಇನ್ನು ಇಂಫಾಲ ಬಿದ್ದಂತೆಯೇ! ಇನ್ನೇನು ನಮ್ಮ ಹತೋಟಿಗೆ ಬಂದಂತೆಯೇ" ಎಂಬ ವಿಶ್ವಾಸದಿಂದಿದ್ದೆವು. ಇಂಫಾಲ ನಮ್ಮ ವಶವಾದ ಕೂಡಲೆ ಅಲ್ಲಿ ಪ್ರಾಂತ್ಯ ಸರ್ಕಾರದ ಘೋಷಣೆ-ಯಾಗಬೇಕೆಂದು ನೇತಾಜೀ ಆ ಸಲುವಾಗಿ ತಮ್ಮ ಇಬ್ಬರು ಕ್ಯಾಬಿನೆಟ್ ಸಚಿವರುಗಳಾದ ಜನರಲ್ ಚಟರ್ಜಿ ಮತ್ತು ಆನಂದ್ ಮೋಹನ್ ಸಹಾಯ್‌ರವರನ್ನು ಕಳಿಸಿ, ಜೂನ್ 21 ರಂದು ರಂಗೂನಿಗೆ ತೆರಳಿದರು.

ಭಾರತ-ಬರ್ಮಾ ಗಡಿಯಲ್ಲಿ ಆಗ ಮುಂಗಾರು ಮಳೆ ಕೊಂಚ ಬೇಗವೇ ಆರಂಭವಾಯಿತು. ಸುರಿವ ಮಳೆ, ಮಳೆಯಿಂದ ಯಾವ ರೀತಿಯ ರಕ್ಷಣೆಗೂ ಎಲ್ಲೂ ಅವಕಾಶವೇ ಇರಲಿಲ್ಲ. ಇದರಿಂದ INA ಪಡೆಗಳು ಮುಂದುವರಿಯುವುದಕ್ಕೆ ಅಡಚಣೆಯುಂಟಾಯಿತು. ಅದೇ ವೇಳೆಗೆ ಬ್ರಿಟಿಷರು ಬೆಂಬಲ ಸೈನ್ಯವನ್ನು ತರಿಸಿಕೊಂಡ ಸಮಾಚಾರವೂ ಬಂದಿತು. ಸರಿ, ಜೂನ್ 26ರಂದು ಅಲ್ಲಿಂದ ಹಿಂತೆಗೆಯಬೇಕೆಂದು ನಮ್ಮ ಸೇನಾ ಕಮ್ಯಾಂಡರ್ ಆದೇಶಿಸಿದರು.

ಈ ಮಧ್ಯೆ ಸಿಂಗಪುರದಿಂದ ರೆಜಿಮೆಂಟಿನ ಮೊದಲ ತಂಡ ರಂಗೂನಿಗೆ ಬಂದಿತು. ಹೊಸ ಶಿಬಿರದಲ್ಲಿ ಬಿರುಸಾದ ತರಬೇತಿ. ಇಲ್ಲಿನ ನಾಯಕತ್ವ ಶ್ರೀಮತಿ ಜಾನಕಿ ದೇವರ್‌ರವರದು. ತಮ್ಮ ದಕ್ಷತೆ ಹಾಗೂ ಸಾಮರ್ಥ್ಯವನ್ನು ನಿರೂಪಿಸಿದವರು.

ಇಂಫಾಲದಲ್ಲಿ ನಾವು ಹಿಮ್ಮೆಟ್ಟಬೇಕಾಗಿ ಬಂದರೂ ನೇತಾಜಿ-ಯವರೇನೂ ಕಂಗೆಡಲಿಲ್ಲ. ಎಲ್ಲರೂ ಎಲ್ಲಾ ಪಡೆಗಳೂ ಎಲ್ಲಾ ಭಾರತೀಯರು ಇದರಿಂದ ವಿಚಲಿತರಾಗದೇ, ಇದೇ ನಿಟ್ಟಿನಲ್ಲೇ ತಂತಮ್ಮ ಕೆಲಸಗಳನ್ನು ಮುಂದುವರಿಸಿಕೊಂಡು ಹೋಗಬೇಕೆಂಬುದೇ ಅವರ ಆಶಯ-ಆದೇಶ.

### ಉದಾರ ಸಹಾಯ ಹಸ್ತ !

ಅದೇ ಸಮಯಕ್ಕೆ ರಂಗೂನಿಗೆ ಬಂದಿದ್ದ ಯಲ್ಲಪ್ಪನವರು ನೇತಾಜಿಯವರ ಸಹಾಯಕ್ಕೆ ಒದಗಿದರು. ಅವರು ಬ್ಯಾಂಕ್ ಆಫ್ ಆಜಾದ್ ಹಿಂದ್ ಸ್ಥಾಪಿಸಿ, ತಾವು ಸಂಗ್ರಹಿಸಿದ್ದ ಹಣವನ್ನೆಲ್ಲಾ ಅಲ್ಲೇ ಠೇವಣಿಯಾಗಿರಿಸಿದರು. ಜುಲೈನಲ್ಲಿ ಅವರು ಭಾರೀ ಸಭೆ ಹಾಗೂ ಮೆರವಣಿಗೆಗಳನ್ನು ಆಯೋಜಿಸಿ, 'ನೇತಾಜೀ ಸಪ್ತಾಹ' ಆಚರಿಸಿದರು. ಈ ಸಂದರ್ಭಗಳಲ್ಲಿ ಅಲ್ಲಿನ ಭಾರತೀಯರು ತಮ್ಮ ಕೈಲಾದಷ್ಟು ಮಟ್ಟಿಗೆ ನಗದು ಹಾಗೂ ಇತರ ರೂಪಗಳಲ್ಲಿ ಕಾಣಿಕೆ ಅರ್ಪಿಸಿದರು. ನಗದು-ಆಭರಣಗಳು ಧಾರಾಳವಾಗಿ ಹರಿದು ಬಂದವು. ಈ ಆಗುಹೋಗುಗಳಿಂದ ಅಳ್ಳೆದೆಯಿಂದ ಕೊಂಚ ಕುಗ್ಗಿಹೋಗಿದ್ದ ಬರ್ಮಾ ಸರ್ಕಾರದ ಬೆನ್ನಲ್ಲಿ ಗುದ್ದಿದಂತಾಗಿ, ಅದೂ ಹುರುಪಿನಿಂದ ಎದ್ದು ನಿಲ್ಲುವಂತಾಯಿತು. ಸಾರ್ವಜನಿಕರ ಅಪೂರ್ವ ಪ್ರತಿಕ್ರಿಯೆ ಹೀಗೆ ಅತ್ಯಂತ ಪ್ರೋತ್ಸಾಹದಾಯಕವಾಗಿತ್ತು.

ಆದರೆ ದುರದೃಷ್ಟವಶಾತ್ ಬರ್ಮಾ ಸರ್ಕಾರದ ಉತ್ಸಾಹ ಬಹಳ ಕಾಲ ಉಳಿಯಲಿಲ್ಲ. ಜಪಾನೀಯರನ್ನು ಸ್ವಾಗತಿಸಿ ಅವರಿಗೆ ಸಹಕಾರ ತೋರಿದ್ದ ಯುವ ಬರ್ಮೀಯರು ಒಳಗೊಳಗೇ ಬ್ರಿಟಿಷ್ ಪರ ಧೋರಣೆಗಳನ್ನು ತಾಳಿದರು. ಕ್ರಮೇಣ ಇಡೀ ಬರ್ಮಾ ಸರ್ಕಾರ ಮತ್ತು ಸೇನೆ ಸಂಪೂರ್ಣವಾಗಿ ಬ್ರಿಟಿಷರ ಪಕ್ಷಕ್ಕೇ ವಾಲಿತು. ಇದಕ್ಕೆ ಹೊರತಾಗಿದ್ದವರು ಡಾ॥ ಬಾ ಮಾವ್ ಮತ್ತು ಅವರ ಸ್ವಂತ ಸಿಬ್ಬಂದಿ ಮಾತ್ರ.

ಇತ್ತ ಮೇಮ್ಯೋವಿನಲ್ಲಿ ಮುಂಚೂಣಿಯಿಂದ ಬರುವ ಗಾಯಾಳುಗಳ ಸಂಖ್ಯೆ ಹೆಚ್ಚುತ್ತಾ ಹೋಯಿತು. ನಾವು ಯಾವುದೇ ಯುದ್ಧದಲ್ಲಿ ಪಾಲ್ಗೊಳ್ಳುವ ಅವಕಾಶಗಳು ದೂರವಾಗುತ್ತಾ ಹೋದಂತೆ, ನಾನು ಮೇಮ್ಯೋವಿನ INA ಆಸ್ಪತ್ರೆಯಲ್ಲೇ ಕೆಲಸ ಮಾಡಲು ನೇತಾಜಿಯವರ ಅಪ್ಪಣೆ ಪಡೆದುಕೊಂಡೆ. ಸಿಂಗಪುರದಿಂದ ಬಂದಿದ್ದ ದಾದಿಯರನ್ನು ಇಲ್ಲೇ ಬರಮಾಡಿಕೊಂಡೆ. ಆಸ್ಪತ್ರೆಯ ಕೆಲಸಗಳಲ್ಲದೇ, ಪ್ರತೀ ದಿನಾ ಮೂರು ತಾಸುಗಳ ಮಿಲಿಟರಿ ತರಬೇತಿಯೂ ನಮಗಿರುತ್ತಿತ್ತು. ಆಸ್ಪತ್ರೆಗೆ ಬರುತ್ತಿದ್ದವರಲ್ಲಿ ಸಾಮಾನ್ಯವಾಗಿ ಕಂಡುಬರುತ್ತಿದುದು ಮಲೇರಿಯಾ ಮತ್ತು ಆಮಶಂಕೆ ಜ್ವರ.

ಯುದ್ಧದ ಗಾಯಾಳುಗಳು ಅನೇಕರು ಮುಂಚೂಣಿಯಲ್ಲೇ ಸತ್ತರು; ಕೆಲವರು ವಾಪಸಿನ ಹಾದಿಯಲ್ಲಿ ಸತ್ತರು ಎಂದು ನಮಗೆ ತಿಳಿದುಬಂದಿತು. ಆ್ಯಂಟಿಸೆಪ್ಟಿಕ್ ಡ್ರೆಸಿಂಗ್ ಸರಬರಾಜಿನ ಕೊರತೆಯೇ ಇದಕ್ಕೆ ಮುಖ್ಯ ಕಾರಣವಾಗಿತ್ತು. ಅಲ್ಲದೆ ಆ ದಿನಗಳಲ್ಲಿ ಪೆನಿಸಿಲಿನ್ ಬಗ್ಗೆಯೂ ನಮಗೆ ಅಷ್ಟು ತಿಳಿದಿರಲಿಲ್ಲ.

ನಮಗಿಂತ ಜಪಾನೀಸೈನಿಕರ ಪಾಡು ಮತ್ತಷ್ಟು ಶೋಚನೀಯವಾಗಿತ್ತು. ಅವರಿಗಂತೂ ರೋಗನಿರೋಧಕ ಶಕ್ತಿಯೇ ಇರಲಿಲ್ಲ. ನಮ್ಮ ಯೋಧರುಗಳು ಗಾಯಗೊಂಡಿದ್ದರೂ, ಅವರ ಹುರುಪು, ಉತ್ಸಾಹಗಳೇನೂ ಕುಂದಿರಲಿಲ್ಲ. ನಮ್ಮ ಎಲ್ಲಾ ಪ್ರಯತ್ನಗಳಿಗೆ ಅವರ ಸಹಕಾರವಿರುತ್ತಿತ್ತು; ಮೆಚ್ಚುಗೆ ಇರುತ್ತಿತ್ತು.

ಸಂಗ್ರಾಹಾನುವಾದ-

***ಹೆಚ್.ಎಸ್. ಗೀತಾ***

*ಕೃಪೆ : "ದಿ ಹಿಂದೂ"*

# ಭಾರತೀಯ ಮಹಿಳೆ ಮತ್ತು ಮತದಾನದ ಹಕ್ಕು

1917ರಲ್ಲಿ ಸೆಕ್ರೆಟರಿ ಆಫ್ ಸ್ಟೇಟ್ ಫಾರ್ ಇಂಡಿಯಾ ಆಗಿದ್ದ ಶ್ರೀ ಇ.ಎಸ್. ಮೊಂಟೆಗು ಭಾರತಕ್ಕೆ ಭೇಟಿಯಿತ್ತಾಗ ಭಾರತೀಯ ಮಹಿಳೆಯರ ಪ್ರಥಮ ನಿಯೋಗ ಅವರನ್ನು ಹೋಗಿ ಕಂಡಿತು. ಶ್ರೀಮತಿ ಸರೋಜಿನಿ ನಾಯ್ಡು ನಿಯೋಗದ ನಾಯಕಿಯಾಗಿದ್ದರು. ದೇಶದ ಇತರೆಡೆಗಳಿಂದ ಹದಿನಾಲ್ಕು ಮಂದಿ ಸದಸ್ಯೆಯರು ಇದರಲ್ಲಿದ್ದರು. ರಾಜಕೀಯ ಹಕ್ಕುಗಳು ಮಹಿಳೆಯರಿಗೂ ಬೇಕು, ಹಾಗೂ ಸದ್ಯದ ರಾಜಕೀಯ ವಿದ್ಯಮಾನದಲ್ಲಿ ಮಹಿಳೆಯ ಪಾತ್ರವೂ ನಿರ್ಮಾಣವಾಗಬೇಕು ಎಂಬ ಬಯಕೆಯಿಂದ ಹೋರಾಟಕ್ಕಾಗಿ ರಚಿತವಾದ ನಿಯೋಗವಿದು. ಇದರ ಸ್ಥಾಪನೆಗೆ ಕಾರಣರಾದ ಶ್ರೀಮತಿ ಮಾರ್ಗರೆಟ್ ಕಸಿನ್ಸ್ ಇದರ ಕಾರ್ಯದರ್ಶಿಯಾಗಿದ್ದರು.

ಮತದಾನದ ನಿಯಮಗಳನ್ನು ತಯಾರಿಸುವಾಗ ಮಹಿಳೆಯರನ್ನೂ ಈ ದೇಶದ ಪ್ರಜೆಗಳೆಂದು ಗಣಿಸಬೇಕು ಎಂಬುದು ಈ ನಿಯೋಗದ ಕೋರಿಕೆಯ ಸಾರಾಂಶ. ನಿಯೋಗ ಮುಂದಿಟ್ಟ ಪ್ರಮುಖ ವಿಷಯಗಳು ಹೀಗಿವೆ :

ಇಂಡಿಯಾಕ್ಕೆ ಸ್ವಾಯತ್ತ ಸರಕಾರ ಬೇಕೆಂಬ ದೇಶದ ಜನರ ಬೇಡಿಕೆಯನ್ನು ಮಹಿಳೆಯರೂ ಅರಿತು ಸಮರ್ಥಿಸುತ್ತಾರೆ. ಅಲ್ಲದೆ ಆದಷ್ಟು ಬೇಗ ಅದು ಅಸ್ತಿತ್ವಕ್ಕೆ ಬರಲೆಂದು ತಮ್ಮ ಸೋದರರ ಜೊತೆ ತಾವೂ ಕಳಕಳಿಯಿಂದ ದನಿ ಗೂಡಿಸುತ್ತಾರೆ. ಗಾಂಧೀಜಿಯವರ ನೇತೃತ್ವದಲ್ಲಿ ನ್ಯಾಶನಲ್ ಕಾಂಗ್ರೆಸ್ ಮತ್ತು ಮುಸ್ಲಿಂಲೀಗ್‌ಗಳು ಬರೆದ ಸುಧಾರಣಾ ಯೋಜನೆಗಳ ಪರವಾದ ಅರ್ಜಿಗೆ ಅಸಂಖ್ಯ ಮಹಿಳೆಯರೂ ಸಹಿ ಹಾಕಿದ್ದಾರೆ. ಬೃಹತ್ ಮಹಿಳಾ ಸಭೆಗಳನ್ನು ನಡೆಸಿದ್ದಾರೆ. ಸುಧಾರಣಾ ಯೋಜನೆಯಲ್ಲಿ ಸೂಚಿಸಿದ ಸ್ವಾಯತ್ತ ಸರಕಾರವನ್ನು ಪಡೆಯುವತ್ತ ಹಲವಾರು ರೀತಿಯಲ್ಲಿ ಶ್ರಮಿಸಿದ್ದಾರೆ.

ದೇಶದ ಜನಸಂಖ್ಯೆಯ ಅರ್ಧದಷ್ಟಿರುವ ನಾವು 'ಸಾಧ್ಯವಾದಷ್ಟೂ ವ್ಯಾಪಕ ಮತದಾನದ ಮೂಲಕ ನೇರವಾಗಿ ಜನರೇ ಕೌನ್ಸಿಲು ಸದಸ್ಯರನ್ನು ಆರಿಸಬೇಕು' ಎಂಬ ಬೇಡಿಕೆಯಲ್ಲಿ ಬಹಳ ಆಸಕ್ತರು. ಅಂತಹ ವ್ಯಾಪಕವಾದ ಮತದಾನದ ವ್ಯವಸ್ಥೆಯಾಗುವಾಗ ನಮ್ಮನ್ನೂ ಈ ದೇಶದ ''ಪ್ರಜೆ''ಗಳಾಗಿ ಪರಿಗಣಿಸಬೇಕೆಂದು ಪ್ರಾರ್ಥಿಸುತ್ತೇವೆ. ಯಾವ ಭೇದಭಾವವಿಲ್ಲದೆ, ಪುರುಷರಿಗೆ ನೀಡಲ್ಪಡುವ ಅವಕಾಶಗಳನ್ನು ನಮಗೂ ನೀಡಬೇಕಾಗಿ ಕೋರಿಕೆ.''

ವಿದ್ಯಾಭ್ಯಾಸ, ಕುಶಲಕಲೆ ತರಬೇತಿ, ಸ್ಥಳೀಯ ಸ್ವಾಯತ್ತ ಸರಕಾರ, ಸಮಾಜ ಹಿತ ಕಾರ್ಯಗಳು ಇತ್ಯಾದಿ ಇನ್ನಿತರ ವಿಷಯಗಳ ಕುರಿತೂ ದೀರ್ಘ ಬೇಡಿಕೆಗಳನ್ನು ಈ ತಿಳುವಳಿಕೆಯ ಪತ್ರ ಒಳಗೊಂಡಿತ್ತು.

ಆದರೆ ಇವೆಲ್ಲ ಘೋರ್ಕಲ್ಲಮೇಲೆ ಮಳೆಗರೆದಂತೆ ಆಯಿತೆನ್ನುವುದಕ್ಕೆ ಶ್ರೀ ಮೊಂಟೆಗು ತನ್ನ ಡೈರಿಯಲ್ಲಿ ಬರೆದಿಟ್ಟದ್ದು ಸಾಕ್ಷಿ. ''ಹುಡುಗಿಯರ ವಿದ್ಯಾಭ್ಯಾಸ ಮತ್ತು ಇನ್ನೂ ಹೆಚ್ಚಿನ ಮೆಡಿಕಲ್ ಕಾಲೇಜು ಇತ್ಯಾದಿಗಳ ಬೇಡಿಕೆಗಾಗಿ ನಮ್ಮನ್ನು ಭೇಟಿ ಮಾಡಿದ ಮಹಿಳೆಯರ ನಿಯೋಗವೊಂದು ಬಹಳ ಸ್ವಾರಸ್ಯಕರವಾಗಿತ್ತು.''

1919ರಲ್ಲಿ ಸೌತ್ ಬೋರೋ ಕಮಿಶನ್ ಮತದಾನದ ಪ್ರಶ್ನೆಯ ಕುರಿತು ಚರ್ಚೆಗೆ ಬಂದಾಗ ಶ್ರೀಮತಿ ಎನಿಬೆಸೆಂಟ್ ಹಾಗೂ ಶ್ರೀಮತಿ ಸರೋಜಿನಿ ನಾಯ್ಡು ಈ ಕಮಿಷನ್ನಿನೆದುರು ಪುರುಷರ ಮತದಾನದ ನೀತಿ ನಿಬಂಧನೆಗಳ ಹಾಗೆಯೇ ಮಹಿಳೆಯರ ಮತದಾನವನ್ನೂ ಪರಿಗಣಿಸಬೇಕೆಂದು ಒತ್ತಾಯಿಸಿತು. ಭಾರತೀಯ ಮಹಿಳೆ ಸಾಮಾಜಿಕವಾಗಿ ದುರ್ಬಲಳೆಂಬುದರ ಮೇಲೆ ಕಮೀಷನ್ ಈ ಕೋರಿಕೆಯನ್ನು ತಳ್ಳಿಹಾಕಿತು. ಎಂತಹ ಹಾಸ್ಯಾಸ್ಪದ! ಹೀಗೆ ಉದ್ಘೋಷಿತವಾದ ನಾಲ್ಕೇವರ್ಷಗಳೊಳಗೆ ಇದೇ ದುರ್ಬಲ ಮಹಿಳೆಗೆ 'ತಾಯ್ನಾಡಿ'ನ ಶಾಸಕಾಂಗಗಳು ಮತದಾನದ ಹಕ್ಕನ್ನು ನೀಡಿದುವು!

ಕಮಿಷನ್ ಮಹಿಳೆಯರ ಸಾಮರ್ಥ್ಯದಿಂದ ಸಹಜವಾಗಿಯೇ ಪ್ರಭಾವಿತವಾಯಿತು. ಮತದಾನದ ಶಿಫಾರಸು ಮಾಡದಿದ್ದರೂ ತನ್ನ ಮನೋಭಾವವನ್ನು ಬದಲಿಸಿಕೊಂಡು ಭಾರತೀಯ ಶಾಸಕಾಂಗಗಳು ಈ ವಿಷಯವನ್ನು ಆಂತರಿಕ ವಿಷಯವನ್ನಾಗಿ ಪರಿಗಣಿಸಿಕೊಂಡು ತಮ್ಮ ತಮ್ಮೊಳಗೆ ಇತ್ಯರ್ಥ ಮಾಡಿಕೊಳ್ಳಬೇಕೆಂದು ಉಪದೇಶಿಸಿತು.

ಮೊಂಟೆಗು-ಚೇಮ್ಸ್‌ಫರ್ಡ್ ವರದಿಯ ಅಂತಿಮ ಶಿಫಾರಸುಗಳು ಕೂಡ ಮಹಿಳೆಯರ ರಾಜಕೀಯ ಸ್ಥಾನಮಾನದ ಕುರಿತು ಚಕಾರವೆತ್ತಲಿಲ್ಲ. ಅವರ ಕೋರಿಕೆಯನ್ನು ಸಂಪೂರ್ಣವಾಗಿ ಅಲಕ್ಷಿಸಿತು. ಆಗ ಶ್ರೀಮತಿ ಕಸಿನ್ಸ್ ಅಖಿಲ ಭಾರತ ಮಹಿಳಾ ನಿಯೋಗದ ಕಾರ್ಯದರ್ಶಿ ಸ್ಥಾನದಿಂದ ಶ್ರೀ ಮೊಂಟೆಗು ಅವರಿಗೆ ಒಂದು ಪತ್ರ ಬರೆದರು.

''ನಮ್ಮ ನಿಯೋಗದ ಶ್ರೀಮತಿ ಸರೋಜಿನಿ ನಾಯ್ಡು ಹಾಗೂ ಇತರ ಸದಸ್ಯರಿಗೆ ನೀವು ನೀಡಿದ ಸಂದರ್ಶನದಲ್ಲಿ ಮಹಿಳೆಯರಿಗೆ ಮತದಾನ ಬೇಡಿಕೆಗೆ ಭಾರತದ ರಾಜಕೀಯ ಸಂಘ ಸಂಸ್ಥೆಗಳು ಪರವಾಗಿವೆಯೇ ಎಂದು ಪ್ರಶ್ನಿಸಿದ್ದೀರಿ. ಅತ್ಯದ್ಭುತ ಬಹುಮತದಿಂದ ಇದನ್ನು ಬೆಂಬಲಿಸಿ ವಿವಿಧ ಪ್ರಾಂತೀಯ ಜಿಲ್ಲಾ ಸಮ್ಮೇಳನಗಳಲ್ಲಿ ನಿರ್ಣಯಗಳು ಅಂಗೀಕೃತವಾಗಿದ್ದನ್ನು ನಾವು ನಿಮಗೆ ಈಗಾಗಲೇ ತಿಳಿಸಿದ್ದೇವೆ.

ಅತ್ಯುಚ್ಚ ರಾಷ್ಟ್ರೀಯ ರಾಜಕೀಯ ಪಕ್ಷವಾದ ಇಂಡಿಯನ್ ನ್ಯಾಶನಲ್ ಕಾಂಗ್ರೆಸ್ 1917ರಲ್ಲಿ ಕಲ್ಕತ್ತಾದಲ್ಲಿ ಸಭೆ ಸೇರಿದಾಗ

ಮಹಿಳೆಯರೆಂಬ ಕಾರಣದಿಂದಲೇ ಅವರನ್ನು ಬದಿಗೊತ್ತದೆ ಪುರುಷ ಮತದಾನವನ್ನು ನಿರ್ಧರಿಸಿದ ಕ್ರಮದಲ್ಲಿಯೇ ಸ್ತ್ರೀಯರ ಮತದಾನ-ವನ್ನೂ ನಿರ್ಣಯಿಸಬೇಕು ಎಂದು ಹೇಳಿದೆ. ನೀವು ಪಾರ್ಲಿಮೆಂಟಿಗೆ ಸಲ್ಲಿಸಲಿರುವ ಮಸೂದೆಯ ಕರಡು ಪ್ರತಿಯಲ್ಲಿ ಈ ಧೋರಣೆಯನ್ನು ಸ್ಫುಟವಾಗಿ ಕಾಣಿಸಬೇಕೆಂದು ನಮ್ಮ ಸದಸ್ಯರು ಕೋರುತ್ತಾರೆ. ಈ ದೇಶದ ಜನಸಂಖ್ಯೆಯ ಅರ್ಧದಷ್ಟು ಜನರ ಸ್ಥಿತಿಯನ್ನು ಮತದಾನದ ಉಪಸಮಿತಿಗಳ ವಶಕ್ಕೆ ಒಪ್ಪಿಸಬಾರದಾಗಿ ವಿನಂತಿ.''

ಮಹಿಳೆಯರಿಗೆ ಮತದಾನದ ಹಕ್ಕು ನೀಡುವ ಜವಾಬ್ದಾರಿಯನ್ನು ಭಾರತದ ಶಾಸಕಾಂಗಗಳಿಗೇ ಕೊಟ್ಟುಬಿಟ್ಟಿದ್ದು ಒಳ್ಳೆಯದೇ ಆಯಿತು. ಯಾಕೆಂದರೆ ಶಾಸಕಾಂಗಗಳು ಸರಿಯಾದ ವೇಳೆಗೆ ಎಚ್ಚತ್ತವು. ಹಾಗೂ ಸರಾಗವಾಗಿ ಸ್ವ-ಇಚ್ಛೆಯಿಂದ ಮತದಾನದ ಹಕ್ಕು ನೀಡಿದುವು.

1921ರಲ್ಲಿ ಮದ್ರಾಸು ಲೆಜಿಸ್ಲೇಟಿವ್ ಕೌನ್ಸಿಲ್ ಪ್ರಥಮತಃ ಮಹಿಳೆಯರಿಗೆ ಮತದಾನದ ಹಕ್ಕನ್ನು ನೀಡಿದ್ದೇ ಸರಿ. ಒಂದಾದ ಮೇಲೊಂದು ಪ್ರಾಂತಗಳು ಇದನ್ನು ಅನುಸರಿಸಿದುವು. 1929ರ ಒಳಗೆ ಪುರುಷರಿಗನ್ವಯಿಸಿದ ನಿಯಮಗಳ ಪ್ರಕಾರವೇ ಮಹಿಳೆಯರಿಗೂ ಮತದಾನದ ಹಕ್ಕುಗಳನ್ನು ಎಲ್ಲಾ ಪ್ರಾಂತೀಯ ಶಾಸಕಾಂಗಗಳೂ ನೀಡಿದುವು. ಈ ಸಂದರ್ಭದಲ್ಲಿ, ಮೊತ್ತಮೊದಲು ಮತದಾನದ ಬೇಡಿಕೆ ಸೊಲ್ಲು ಎತ್ತಿದ ಮೊದಲ ಮಹಿಳೆ, ಶ್ರೀಮತಿ ಮಾರ್ಗರೆಟ್ ಕಸಿನ್ಸ್, ಈ ಮಹತ್ವಪೂರ್ಣ ಮಾತುಗಳನ್ನಾಡಿದರು. ''ಈ ಮತದಾನ ಅಖಂಡ ಭಾರತದ ಬದುಕಿನ ಮಹಾನ್ ಘಟಕಕ್ಕೆ ಭಾರತೀಯ ಸ್ತ್ರೀತ್ವವನ್ನು ಹೊಂದಿಸುವ ಒಂದು ಕೊಂಡಿ. 1913ರಲ್ಲಿ ಐರಿಷ್ ಹೋಂ ರೂಲ್ ಕಾಯಿದೆಯಲ್ಲಿ ಮಹಿಳೆಯರಿಗೆ ಮತದಾನದ ಹಕ್ಕುಗಳನ್ನು ಕಳೆದುದನ್ನು ನಾವು ನಾಲ್ವರು ಐರಿಷ್ ಮಹಿಳೆಯರು ಡಬ್ಲಿನ್‌ನಲ್ಲಿ ಪ್ರತಿಭಟಿಸಿದ್ದಕ್ಕಾಗಿ, ಇದೇ ಹತ್ತು ವರ್ಷಗಳ ಕೆಳಗೆ ನಾವು ಜೈಲಿಗೆ ಹೋಗಿದ್ದರ ಹಿನ್ನೆಲೆಯಲ್ಲಿ, ನನಗಿದು ಈಗ ಎಂತಹ ಅನುಭವ!

ಇಂಗ್ಲೆಂಡಿನ ಹಾಗೂ ಐರ್‌ಲ್ಯಾಂಡಿನ ಪುರುಷ ರಾಜಕಾರಣಿಗಳು, ಪತ್ರಿಕೆಗಳನ್ನು ತಮ್ಮ ಮುಷ್ಟಿಯೊಳಿರಿಸಿಕೊಂಡ ಪುರುಷರು, ಬೀದಿಬೀದಿಗಳ ಪುರುಷರು ಮಾಡಿದ ಅನ್ಯಾಯಗಳ ವಿರುದ್ಧ ಸತತ 8 ವರ್ಷಗಳ ಕಾಲ ಹೋರಾಡಿ ಸಂಕಟದಿಂದ ನೊಂದ ನನ್ನಂತಹ ಮಹಿಳೆಯರಿಗೆ ಮಾತ್ರ ಮಹಿಳಾ ಮತದಾನದ ಬಗ್ಗೆ ಭಾರತೀಯ ಶಾಸಕಾಂಗಗಳು ತೋರಿದ ಘನತೆ, ದೂರದರ್ಶಿತ್ವವನ್ನು ಪೂರ್ಣ-ಪ್ರಮಾಣದಲ್ಲಿ ಮೆಚ್ಚಿಕೊಳ್ಳಲು ಸಾಧ್ಯವೇನೋ.'' ಹೀಗೆ ಬರೆಯುತ್ತಾ ಮಾರ್ಗರೆಟ್ ಕಸಿನ್ಸ್ ''ಮಹಿಳೆಯರಿಗೆ ಮತದಾನದ ಹಕ್ಕನ್ನು ನೀಡುವುದರ ಮೂಲಕ ಭಾರತೀಯ ಪುರುಷರು ಪ್ರಜಾಪ್ರಭುತ್ವದ ಮೌಲ್ಯಗಳನ್ನರಿತ ಮಹಿಳೆಯರ ಆಸೆ ಆಕಾಂಕ್ಷೆಗಳ ಬಗ್ಗೆ ಸಹಾನು-ಭೂತಿಪರ ದೃಷ್ಟಿಕೋನವನ್ನು, ತಮ್ಮ ರಾಜಕೀಯ ಚರಿತ್ರೆಯಲ್ಲಿಯೇ ಹಿಂದೆಂದೂ ಇಲ್ಲದ ಧೈರ್ಯದ ಹೆಜ್ಜೆಯನ್ನು ಇಡುತ್ತ ಅತ್ಯುನ್ನತ ರಾಜಕೀಯ ಮುತ್ಸದ್ದಿತನ ತೋರಿದರು''- ಎಂದು ಭಾರತೀಯ ಪುರುಷರನ್ನು ಅಭಿನಂದಿಸಿದರು.

*ಸಂಗ್ರಹ- 'ಭಾರತೀಯ ಮಹಿಳೆಯರ ಸ್ವಾತಂತ್ರ್ಯ ಹೋರಾಟ'*
ಕಮಲಾದೇವಿ ಚಟ್ಟೋಪಾಧ್ಯಾಯ - ಅನು: ವೈದೇಹಿ

*

## ಚರಿತ್ರೆಯತ್ತ ಒಂದು ಹೊರಳುನೋಟ

*ಭಾರತೀಯ ಮಹಿಳೆಯರ ಸಾಧನೆಯ ಬಗ್ಗೆ ಕರ್ನಾಟಕದ ಹೆಮ್ಮೆಯ ಪ್ರತೀಕ ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯ. ಅವರು ಗಾಂಧೀಜಿ ನೇತೃತ್ವದ ಸ್ವಾತಂತ್ರ್ಯ ಹೋರಾಟದಲ್ಲಿ ಮುಂಚೂಣಿಯಲ್ಲಿದ್ದವರು, ದೇಶದ ಸಾಂಸ್ಕೃತಿಕ ಪುನರುತ್ಥಾನಕ್ಕೆ ಸಕ್ರಿಯವಾಗಿ ದುಡಿದ ಮಹಿಳೆ. ಸ್ವಾತಂತ್ರ್ಯ ಆಂದೋಲನಕ್ಕೆ ಮಹಿಳೆಯರ ಬಿಡುಗಡೆಯ ಹೋರಾಟವನ್ನೂ ಬೆಸೆದು, ಆ ಹೋರಾಟಕ್ಕೆ ಒಂದು ಸಮಗ್ರತೆ ತಂದುಕೊಟ್ಟ ಈ ಹೋರಾಟಗಾರ್ತಿಯ ಅನುಭವ ಕಥನಗಳಿಂದ ಕೆಲವು ಅಪರೂಪದ ವಿವರಗಳನ್ನು, ವಿಚಾರಗಳನ್ನು ಹೆಕ್ಕಿ ಇಲ್ಲ ನೀಡಲಾಗಿದೆ. ನಮ್ಮ ದೇಶದ ಚರಿತ್ರೆಯತ್ತ ಬೇರೊಂದು ಒಳನೋಟ ಈ ಟಿಪ್ಪಣಿಗಳಿಂದ ದೊರೆಯಬಲ್ಲದು, ಎಂಬುದು ನಮ್ಮ ನಂಬಿಕೆ.*

-ಸಂ.

೧

ಸಾಮಾಜದ ಹಳೆಯ ಸಂಪ್ರದಾಯಗಳನ್ನೆಲ್ಲ ಕೆಡವಿ ಹೊಸತಿಗೆ ಹಾತೊರೆದವರಿಗೆ ಸಂಪ್ರದಾಯನಿಷ್ಠರ ತೀವ್ರ ವಿರೋಧವಿತ್ತು. ಹೀಗಾಗಿ ಇಡೀ ಚೌಕಟ್ಟನ್ನೇ ಕೆಡವುವುದರ ಬದಲಿಗೆ, ಅದರ ಸವಕಲು ಭಾಗಗಳನ್ನು ಕಿತ್ತು ಬಿಸುಡುವುದು ಸಮಾಜ ಸುಧಾರಕರ ಗುರಿಯಾಗಿತ್ತು. ವಸಾಹತು ಆಡಳಿತಕ್ಕೆಲ್ಲ ಬ್ರಿಟಿಷರು ಬ್ರಾಹ್ಮಣರನ್ನೇ ನೇಮಿಸಿದ್ದರಲ್ಲಿ ಆಡಳಿತಾತ್ಮಕ ಅವಶ್ಯಕತೆಯಿತ್ತು. ಓದಲು ಬರೆಯಲು ಲೆಕ್ಕಪತ್ರ ಇಡಲು ಸಾಮರ್ಥ್ಯ ಇದ್ದದ್ದು ಬ್ರಾಹ್ಮಣರಿಗೇ, ಸಾಮಾಜಿಕವಾಗಿ ಗೌರವಾನ್ವಿತ ನೆಲೆಯಲ್ಲಿದ್ದ ಅವರ ಕೆಲಸಗಳನ್ನು ಬೇರೆ ಜನ ಸುಲಭವಾಗಿ ಸ್ವೀಕರಿಸುತ್ತಾರೆಂಬುದನ್ನು ಬ್ರಿಟಿಷರು ಅರಿತಿದ್ದರು. ಹೀಗಾಗಿ ಬ್ರಾಹ್ಮಣರೇ ಪಾಶ್ಚಾತ್ಯ ಪ್ರಭಾವಕ್ಕೆ ನೇರವಾಗಿ ತೆರೆದುಕೊಂಡರು. ಇದರಿಂದ ಹೊರಗಿನ ಉನ್ನತಸ್ಥಾನ, ತಮ್ಮೊಳಗಿನ, ತಮ್ಮ ಸಮುದಾಯದ ಒಳಗಿನ ಸಾಂಪ್ರದಾಯಿಕ ಮನೋಭಾವಗಳ ನಡುವೆ ಅವರೇ ಹೆಚ್ಚು ಒಳತೋಟಿಗೆ ಒಳಗಾದವರು.

ಹಳೆಯದನ್ನು ಗೌರವಿಸುವ ತೋರಿಕೆಯವರು ಸತೀಪದ್ಧತಿಯನ್ನು ಭಾವೋದ್ರೇಕದಿಂದ ಎತ್ತಿಹಿಡಿದರೆ, ಪುರೋಗಾಮಿಗಳು ಅದನ್ನು ಖಂಡಿಸಿ ಹೋರಾಟನಡೆಸತೊಡಗಿದರು. ಇಡೀ ಇಂಡಿಯಾದಲ್ಲಿ ಬೇರೆಲ್ಲೂ ಇಲ್ಲದಿದ್ದಷ್ಟು 57%ರಷ್ಟು ಸತೀಪ್ರಕರಣಗಳಿಗೆ ಬಂಗಾಳ ನೆಲೆಯಾಗಿತ್ತು. ''ಬ್ರಿಟಿಷ್ ವಸಾಹತು ಶಾಹಿಯ ಪಾಪದ ಕೂಸಾಗಿ 'ಸತೀ' ಮತ್ತೆ ಮೈತಾಳಿಬಂದದ್ದು ಒಂದು ವ್ಯಂಗ್ಯ.''

ಬ್ರಿಟಿಷರು ಬರುವುದಕ್ಕೂ ಮೊದಲು ಮೊಗಲ್ ಅರಸರೂ ಈ ದುಷ್ಟಪದ್ಧತಿಯನ್ನು ನಿಲ್ಲಿಸಲು ಗಂಭೀರ ಕಾಳಜಿಯಿಂದಲೇ ಯತ್ನಿಸಿದ್ದರು. ಹ್ಯುಮಾಯೂನನ ಕಾಲಕ್ಕೆ ಸತೀ ಹೋಗಲು ಪರವಾನಗಿ ಪಡೆಯಬೇಕಿತ್ತು. ಈ ಪ್ರಕರಣಗಳನ್ನು ತಡೆಗಟ್ಟಲು ಅಕ್ಬರನೂ ಕೆಲಮಟ್ಟಿಗೆ ಯತ್ನಿಸಿದ್ದ. ಜಹಂಗೀರನಂತೂ ಕಾನೂನು ಹೊರಡಿಸಿ ಸತೀ ಹೋಗುವುದನ್ನು ನಿಷೇಧಿಸಿದ್ದ. ಔರಂಗಜೇಬನೂ ಇದನ್ನು ಅನುಸರಿಸಿದ. ಆದರೆ ಚರಿತ್ರೆಯಲ್ಲಿ ಈ ಮೊಘಲ್ ದೊರೆಗಳು ಮಾಡಿದ್ದ ಇಂಥ ಪ್ರಗತಿಪರ ಯತ್ನಗಳು ಸಾಮಾನ್ಯ ಜನಕ್ಕೆ ಇಂದು ಗೊತ್ತೇ ಇಲ್ಲ. 'ಸತೀ' ಪದ್ಧತಿಯ ನೆಲೆಬೀಡಾದ ರಜಪೂತ ಜನಾಂಗದಲ್ಲೂ ಬುಂದೇಲ ಖಂಡದ ರಾವ್ ಬಿಷನ್‌ಸಿಂಗ್‌ನಂಥವರು ಇದರ ವಿರುದ್ಧ ದಂಡ, ಕಠಿಣವಾದ ಜೈಲುವಾಸ ಮುಂತಾದ ಶಿಕ್ಷೆ ನೀಡಿ ತಡೆಗಟ್ಟಲು ಯತ್ನಿಸಿದ್ದರು. ಆದರೆ ಬ್ರಾಹ್ಮಣರ ಕೈಗೆ ಅಧಿಕಾರ ಸಿಕ್ಕು ಪೇಶ್ವೆಗಳ ಆಡಳಿತ ಬಂದಾಗ ಆ ಪ್ರದೇಶದಲ್ಲಿ ಇಂಥ ವಿರೋಧದ ಕಾವು ಬತ್ತಿಹೋಯ್ತು. ಜನರಲ್ಲಿ ಬಲವಾಗಿದ್ದ ಧರ್ಮಾಂಧತೆಯನ್ನು ಬ್ರಿಟಿಷ್ ನ್ಯಾಯಾಲಯಗಳು ಇಂಗ್ಲೆಂಡಿನ ದೇಶೀಯ ಪೂರ್ವಗ್ರಹಗಳಿಂದ ವಿಶ್ಲೇಷಣೆ ಮಾಡುತ್ತಿದ್ದು, ಅವು ಅಂದಿನ ಭಾರತೀಯರ ಅಗತ್ಯಗಳನ್ನು ಮುಟ್ಟಲೇ ಇಲ್ಲ. 1812ರಲ್ಲಿ ಧಾರ್ಮಿಕ ನಿಯಮಗಳ ಪಾಲನೆ ವಿಷಯದಲ್ಲಿ ಸರ್ಕಾರ ಎಚ್ಚರಿಕೆಯಿಂದ ವರ್ತಿಸಬೇಕೆಂದು ಆಜ್ಞೆ ಇದ್ದು, ದೇಶೀಯರ ಶವಸಂಸ್ಕಾರಗಳ ಸಂದರ್ಭದಲ್ಲಿ ಪೋಲೀಸು ಅಧಿಕಾರಿಯೊಬ್ಬ ಇರಲೇ ಬೇಕಿತ್ತು. ಸತೀ ಪದ್ಧತಿಯನ್ನು ನಿಲ್ಲಿಸುವ ದೃಷ್ಟಿ ಇದ್ದಂತೆ ತೋರುತ್ತಿದ್ದ ಈ ಕಾನೂನಿನ ಪಾಲನೆ, ವಾಸ್ತವದಲ್ಲಿ ಸತೀ ಹೋಗುವಿಕೆ ಹೆಚ್ಚಲು ಆಸ್ಪದ ನೀಡಿತು. ಯೂರೋಪಿಯನ್ ಮ್ಯಾಜಿಸ್ಟ್ರೇಟರುಗಳು, ವಿದೇಶೀಯರು ಹಾಜರಿರುವುದು ಜನಸಮೂಹದ ಉದ್ರೇಕವನ್ನು ಹೆಚ್ಚಿಸಿ, ಪತ್ನಿಯ ಬಲಿಯನ್ನು ಸಮರ್ಥಿಸುವಂತೆ ತೋರುತ್ತಿತ್ತು.

೨

ವಿಧವಾ ವಿವಾಹ ಕಾಯಿದೆ ಬರಲು ಬಂಗಾಲದ ಈಶ್ವರಚಂದ್ರ ವಿದ್ಯಾಸಾಗರರು 27ವರ್ಷದ ದೀರ್ಘ ಹೋರಾಟ ಮಾಡಬೇಕಾಯಿತು. ಕೊನೆಗೆ 1856ರಲ್ಲಿ ವಿಧವಾ ಪುನರ್ವಿವಾಹ ಕಾಯಿದೆ ಅಸ್ತಿತ್ವಕ್ಕೇನೋ ಬಂತು. ಆದರೆ ಅದು ಪೂರ್ತಿ ಅಂದಿನ ಆಲೋಚನಾ ರೀತಿಯನ್ನು ಬಯಲುಗೊಳಿಸುವಂತೆ ಒಕ್ಕಣೆ ಹೊಂದಿದೆ. ವಿಧವೆ ಮತ್ತೆ ಮದುವೆ ಆದರೆ ತನ್ನ ಮೃತಪತಿಯ ಆಸ್ತಿಯ ಮೇಲಿನ ಹಕ್ಕುಗಳನ್ನು ಕಳೆದುಕೊಳ್ಳುವುದಲ್ಲದೆ, ಅವಳೂ ಸತ್ತಂತೆಯೇ ಎಂದು ಭಾವಿಸಿ, ಅವಳ ಮೊದಲ ಪತಿಯ ಆಸ್ತಿ, ನಂತರದ ಹಕ್ಕುದಾರರಿಗೆ ಸೇರಬೇಕು, ತನ್ನ ಮಕ್ಕಳಿಗೂ ಅವಳು ಪೋಷಕಳಾಗಿ ಉಳಿಯಲಾರಳು!

ವಿಧವಾವಿವಾಹ ಚಾಲನೆ ಪಡೆದದ್ದು ತೀರಾ ನಿಧಾನವಾಗಿ ಇವರಿಗೆ ಸಹಾಯಹಸ್ತ ನೀಡುವವರ ತಂಡಗಳೂ ಕಡಿಮೆಯಿದ್ದವು. ಬಿಟ್ಟಿಯಾಗಿ ಮೈಮುರಿಯ ದುಡಿಯುವ, ಮನೆಯ ಎಲ್ಲ ಕೆಲಸ ನೋಡಿಕೊಳ್ಳುವ ವಿಧವೆಯರನ್ನು ಮದುವೆ ಮಾಡಿಕೊಡುವುದು ಆರ್ಥಿಕವಾಗಿ ಲಾಭಕರವಾಗಿರಲಿಲ್ಲ. ಹಾಗಾಗಿ ಮನೆ ಯಜಮಾನರು ವಿಧವಾ ವಿವಾಹವನ್ನು ಒಟ್ಟಾಗಿ ವಿರೋಧಿಸಿದರು. 1881ರಲ್ಲಿ ದೇಶದಲ್ಲಿ ಇದ್ದ ವಿಧವೆಯರ ಸಂಖ್ಯೆ ದಿಗ್ಭ್ರಮೆ ಹಿಡಿಸುವಷ್ಟು ದೊಡ್ಡದು. ಸರಿಯಾದ ಶಿಕ್ಷಣವಿಲ್ಲದೆ, ಆರ್ಥಿಕ, ಸಾಮಾಜಿಕ ಸ್ವಾತಂತ್ರ್ಯವೂ ಇಲ್ಲದೆ ವಿಧವೆಯರ ಸ್ಥಿತಿ ಚಿಂತಾಜನಕವಾಗುತ್ತಾ ಹೋಯಿತು. ಕಂಗೆಟ್ಟ ಅತೃಪ್ತ ವಿಧವೆಯರು ವೇಶ್ಯೆಯರಾಗುವುದೂ ಹೆಚ್ಚಿತು. 1931ರ ಒಂದು ವರದಿ ಪ್ರಕಾರ 10 ವರ್ಷಕ್ಕೂ ಕಡಿಮೆ ವಯಸ್ಸಿನ ವಿಧವೆಯರ ಸಂಖ್ಯೆ 51,000ದಷ್ಟು! ಇಂಥವರ ಶಿಕ್ಷಣಕ್ಕೆಂದೇ ವಿಶೇಷ ವಿದ್ಯಾಸಂಸ್ಥೆಗಳನ್ನು ಪ್ರಾರಂಭ ಮಾಡುವುದು, ಅವರಿಗೆ ಆರ್ಥಿಕ ಸ್ವಾವಲಂಬನೆಗೆ ಅವಕಾಶ ಕಲ್ಪಿಸುವುದು ಅಂದಿನ ಸುಧಾರಕರ ಮುಖ್ಯಕಾರ್ಯಕ್ರಮಗಳಾದವು. 1887ರ ನಂತರ ದೇಶದಾದ್ಯಂತ ಇಂಥ ವಿಧವಾಶ್ರಮಗಳು ಪ್ರಾರಂಭವಾದವು. ಇವರ ತರಬೇತಿ ಕರಕುಶಲತೆ/ಗುಡಿ ಕೈಗಾರಿಕೆಗಳಿಗೇ ಸೀಮಿತವಾಗಿತ್ತು. ಆಮೇಲೆ ವಿಧವಾ ಪುನರ್ವಿವಾಹ ಸಮಾಜಗಳು ಹುಟ್ಟಿಕೊಂಡವು. 1869ರಲ್ಲಿ ಮುಂಬೈನಲ್ಲಿ ವಿಧವಾವಿವಾಹವಾಗಿ ಈ ಕಾರ್ಯಕ್ಕೆ ನಾಂದಿಹಾಡಿದವರು ಮಹರ್ಷಿ ಕರ್ವೆ. ಮುಂದೆ ಅವರೇ 1893ರಲ್ಲಿ ವಾರ್ಧಾದಲ್ಲಿ ವಿಧವಾ ವಿವಾಹ ಸಂಘವನ್ನು ಹುಟ್ಟುಹಾಕಿದರು. ವಿಧವೆಯರನ್ನು ಮದುವೆಯಾಗಲು ಸಿದ್ಧವಾದವರಿಗಷ್ಟೇ ಸದಸ್ಯತ್ವ ಲಭ್ಯವಿದ್ದು, ಸಹಭೋಜನ, ಸಮಾನವಾಗಿ ನಡೆಸಿಕೊಳ್ಳುವಿಕೆ ಇವರ ಕರಾರುಗಳಾಗಿದ್ದವು.

೩

1873ರಲ್ಲಿ ಮೊತ್ತಮೊದಲಬಾರಿಗೆ ಮದುವೆ ವಯಸ್ಸನ್ನು ಕಾಯಿದೆಬದ್ಧವಾಗಿ ನಿಗದಿ ಪಡಿಸುವ ಯತ್ನ ನಡೆಯಿತು. ಹುಡುಗಿಯರಿಗೆ 14 ಹುಡುಗರಿಗೆ 18 ವರ್ಷಗಳೆಂದು ನಿಗದಿ ಮಾಡಿದಾಗ ಸನಾತನಿಗಳು ತೀವ್ರವಾಗಿ ಇದನ್ನು ವಿರೋಧಿಸಿದರು. ಎಳವೆಯಲ್ಲೆ ಹುಡುಗಿಯರನ್ನು ಮದುವೆಯ ಬಲೆಯೊಳಕ್ಕೆ ಕೆಡವಿಬಿಟ್ಟರೆ ಅದರಿಂದ ಹುಡುಗಿಯರಿಗೆ ಭದ್ರತೆ ಸಿಕ್ಕಿ ಅವರ ನೈತಿಕತೆ ರಕ್ಷಿತವಾಗುವುದೆಂಬ ನಂಬಿಕೆಯೇ ಅದಕ್ಕೆ ಕಾರಣ. ನಾನಾ ಆಂತರಿಕ ಕಾರಣಗಳಿಂದ ಬಾಲ್ಯ ವಿವಾಹಕ್ಕೆ ಒತ್ತುದೊರಕಿತ್ತು. ವಿವಾಹಿತ ಹುಡುಗಿಯರು ಬೇಗ ತೀರಿಕೊಳ್ಳುತ್ತಿದ್ದರು. ಜನಗಳಲ್ಲಿ

ಒಳಯುದ್ಧಗಳ, ಡಕಾಯಿತರ ಆಕ್ರಮಣಗಳು, ದುರ್ಬಲ ಕಾನೂನು ವ್ಯವಸ್ಥೆಗಳು ಕಾರಣಗಳು. ಬಾಲ್ಯವಿವಾಹವನ್ನು ಬರೋಡಾ ಮಹಾರಾಜ ಧೈರ್ಯವಾಗಿ ವಿರೋಧಿಸಿ, ಹುಡುಗಿಯರಿಗೆ 12ಕ್ಕೆ ಹುಡುಗರಿಗೆ 16ಕ್ಕೆ ವಿವಾಹವನ್ನು ವಿಧಿಸಿದ್ದ. ಇದಷ್ಟೇ ಅಲ್ಲ, ಕೋಟಾ, ಗೊಂಡ, ರಾಜಕೋಟೆ, ಭರತಪುರ, ಕಾಶ್ಮೀರ ರಾಜ್ಯಗಳೂ ಬಾಲ್ಯವಿವಾಹವನ್ನು ವಿರೋಧಿಸುವ ಕಾನೂನು ಜಾರಿಗೊಳಿಸಿದ್ದವೆಂಬುದು ಬಹಳಷ್ಟು ಜನಕ್ಕೆ ತಿಳಿದಿಲ್ಲದ ಸಂಗತಿಯಾಗಿದೆ.

ಸಮಾಜ ಸುಧಾರಣೆಗೆ ಮಹಿಳೆಯರೂ ಪುರುಷರ ಜೊತೆಗೂಡಿ ಪ್ರಯತ್ನ ಮಾಡಬೇಕಾದ್ದು ಅನಿವಾರ್ಯವಾಗಿತ್ತು. ಜಾತಿಪದ್ಧತಿ, ಸತೀಪದ್ಧತಿ, ಹೆಣ್ಣುಶಿಶುಹತ್ಯೆ, ಬಾಲ್ಯವಿವಾಹ, ಬಹುಪತ್ನಿತ್ವ, ವರದಕ್ಷಿಣೆ, ಪರದಾ, ವಿಧವಾ ಶೋಷಣೆಗಳಿಂದ ಕೊಳೆತಿದ್ದ ಭಾರತೀಯ ಸಮಾಜವನ್ನು ಹೆಣ್ಣುಗಂಡುಗಳಿಬ್ಬರೂ ಒಟ್ಟಾಗಿ ಸೇರಿಯೇ ತೊಳೆಯಬೇಕಾಗಿತ್ತು. ವಿವಿಧ ಜನಾಂಗಗಳ ಜನರು ಈ ಪ್ರಕ್ರಿಯೆಗೆ ಪ್ರತಿಕ್ರಿಯಿಸಿದ್ದ ಬಗೆ ಕುತೂಹಲಕರ.

ವ್ಯಾಪಾರಿ ಮಾರವಾಡಿಗಳು ಕಡುಸಂಪ್ರದಾಯಸ್ಥರು, ಮೂಲದಲ್ಲಿ ರಾಜಸ್ಥಾನದವರಾದರೂ ಅನೇಕ ಉಪಜಾತಿಗಳಾಗಿ ಒಡೆದು ದೇಶವಿಡೀ ಹರಡಿದ್ದ ಈ ಜನರು ದುಷ್ಟ ಪದ್ಧತಿಗಳನ್ನು ಉಜ್ಜಿಹಾಕುವ ಉದ್ದೇಶದಿಂದ ಕ್ರಿಯಾಶೀಲರಾಗಿ ಆಲ್‌ಇಂಡಿಯಾ ಮಾರ್ವಾಡಿ ಫೆಡರೇಶನ್ ಎಂಬುದನ್ನು ಸ್ಥಾಪಿಸಿದರು. ಪರದಾ ನಿರ್ಮೂಲನ, ಆಡಂಬರದ ಮದುವೆಗಳು, ವರದಕ್ಷಿಣೆಗಳ ವಿರೋಧಗಳು ಇವರ ಮುಖ್ಯಕಾರ್ಯಕ್ರಮಗಳು. ಚಿಕ್ಕಹುಡುಗಿಯರನ್ನು ಮುದುಕರಿಗೆ ಕಟ್ಟುವ ಯತ್ನವಿದ್ದರೆ ಅಂಥ ಕಡೆಗಳಿಗೆ ಒಟ್ಟಾಗಿ ಹೋಗಿ ಘೋಷಣೆಗಳನ್ನು ಕೂಗುತ್ತಾ, ಪ್ಲೆಕಾರ್ಡ್ ಹಿಡಿದು ಪ್ರತಿಭಟನೆಕಾರರು ಪ್ರವೇಶಿಸುವಾಗ ಅವರಲ್ಲಿ ಪರದೆ ಕಿತ್ತೆಸೆದು ಬೆಂಬಲಿಸುತ್ತಿದ್ದ ಸ್ತ್ರೀಯರೂ ಸೇರಿರುತ್ತಿದ್ದರು. ಒಂದು ಪರ್ದಾವಿರೋಧಿ ಸಮ್ಮೇಳದಲ್ಲಿ ಸಾವಿರ ಸ್ತ್ರೀಯರು ಪಾಲ್ಗೊಂಡಿದ್ದು, ಕುದುರೆ ಮೇಲೆ ಕುಳಿತು ಮೆರವಣಿಗೆ ಮಾಡಿದ್ದರು. ಆದರೆ ಈ ಹೆಂಗಸರನ್ನು ತೀರಾ ಕೆಟ್ಟದಾಗಿ ನಡೆಸಿಕೊಂಡ ಜನರು ಇವರನ್ನು ಮುಖದಮೇಲೆ ಉಗಿದರು. ಇವರಲ್ಲಿ ಹಲವರು ಆಸ್ಪತ್ರೆಗೂ ಹೋಗಬೇಕಾಗಿಬಂತು.

''ಭಾರ್ಗವ'' ಜಾತಿಯಲ್ಲಿ ಬಾಲ್ಯವಿವಾಹ, ವರದಕ್ಷಿಣೆಗಳಿರಲಿಲ್ಲ. ಅಂತರ್ಜಾತೀಯವಿವಾಹಕ್ಕೂ ಅಡ್ಡಿಯಿರಲಿಲ್ಲ. ಮದುವೆಗಾಗಿ ತಾವೇ ಸಂಹಿತೆಯೊಂದನ್ನು ಮಾಡಿಕೊಂಡಿದ್ದ ಈ ಜನ ಪುರೋಹಿತರೇ ಬೇಕಿಲ್ಲದ ಸರಳ ರೂಪದ ಮದುವೆಗಳನ್ನು ನಡೆಸುತ್ತಿದ್ದರೆ ಇದೇ ರೀತಿ ಗುಜರಾತಿನ ''ವಾನಿಯಾ'' ಪಂಗಡದವರು ತಾವಾಗಿ ಮಕ್ಕಳ ಮದುವೆಯ ವಯಸ್ಸನ್ನು ಹೆಚ್ಚಿಸಿಕೊಂಡಿದ್ದರು. ರೈಕ್‌ವಾಲ್ ಪಂಗಡದ ಜನ ಬಾಲವಿವಾಹವನ್ನೇ ನಿಲ್ಲಿಸಲು ನಿರ್ಧರಿಸಿದ್ದರು. ಅವಶ್ಯಕ ಕಾನೂನುಗಳು ಇಲ್ಲದಿದ್ದಾಗ ಈ ರೀತಿ ಚಿಕ್ಕ ಚಿಕ್ಕ ಜನಸಮುದಾಯಗಳು ತಮ್ಮ ಉದ್ಧಾರಕ್ಕೆ ತಾವೇ ಮುಂದಾಗಿದ್ದರು.

(ಆಧಾರ: Indian Women's Battle for Freedom"
-Dr. Kamaladevi Chattopadhyaya)

## ಚರಿತ್ರೆಯ ಮರುಸೃಷ್ಟಿ ?

ರಾಷ್ಟ್ರೀಯತಾವಾದಿ ಆಂದೋಲನದಲ್ಲಿ ಸಾಂಸ್ಕೃತಿಕ ಚರಿತ್ರೆಕಾರರ ಗಮನವೆಲ್ಲ ''ಆರ್ಯ ಹಿಂದೂತ್ವ''ದ ಪರಿಕಲ್ಪನೆಯ ಸುತ್ತಲೂ ಬೆಳೆದವು. ವೇದಗಳು, ವೈದಿಕ ಸಾಹಿತ್ಯ, ಪ್ರಾಚೀನ ಭಾರತಗಳನ್ನು ಕುರಿತ ಚರ್ಚೆಗಳ ಮೂಲಕ ಆರ್ಯ ಪುರುಷನು ಭಾರತೀಯ ನಾಗರಿಕತೆಯ ಕೇಂದ್ರವಸ್ತುವಾಗಿ ಹೊರಹೊಮ್ಮಿದ. ಆರ್ಯ ಮಹಿಳೆ, ಈ ಆರ್ಯ ಪುರುಷನಿಗೆ ಸರ್ವ ರೀತಿಯಲ್ಲೂ ಸಹಧರ್ಮಿಣಿಯಾಗಿ ಆ ಛಾಯಾಪಾತ್ರದ ಛಾಯಾನುವರ್ತಿಯಾದಳು. ಋಗ್ವೇದದ ಸೂಕ್ತಗಳನ್ನು ರಚಿಸಿದವರು ಎನಿಸಿಕೊಂಡ ಕೆಲವು ಸ್ತ್ರೀಯರು, ಉಪನಿಷತ್ತುಗಳ ಬ್ರಹ್ಮವಾದಿನಿಯರನ್ನು ಮತ್ತೆ ಮತ್ತೆ ಚರ್ಚಿಸುತ್ತ, ಅಂದಿನ ಯುಗದಲ್ಲಿ ಸ್ತ್ರೀಯರಿಗಿದ್ದ ಶಿಕ್ಷಣಾವಕಾಶ, ವಿದ್ವತ್ತು, ಆಧ್ಯಾತ್ಮಿಕ ಸಾಧನಾವಕಾಶಗಳಿಗೆ ಇವರೇ ಉದಾಹರಣೆಗಳು ಎಂದು ಪ್ರತಿಪಾದಿಸಲಾಯಿತು. ಈ ಯುಗದ ಮುಂದಿನ ಕಾಲವೆಲ್ಲ ಸ್ತ್ರೀಯರ, ಭಾರತೀಯ ಸಂಸ್ಕೃತಿಯ ಅವನತಿಯ ಯುಗವೆಂದು ಅರ್ಥೈಸಲಾಯಿತು. ಆದ್ದರಿಂದ ಆ ಬೇರೆ ಬೇರೆ ಕಾಲಗಳಲ್ಲಿ ಸ್ತ್ರೀಯರು ರಚಿಸಿರಬಹುದಾದ ಸಾಹಿತ್ಯವನ್ನೆಲ್ಲ ನಿರ್ಲಕ್ಷಿಸಲಾಯಿತು. ಸ್ವಾತಂತ್ರ್ಯ ಆಂದೋಲನದ ಅವಧಿಯಲ್ಲಿ ಚರಿತ್ರೆಯ ಮರುಸೃಷ್ಟಿ ಹೀಗೂ ಆದದ್ದು ಕುತೂಹಲಕರ.

# ಜೋಸೆಫೀನ್ ಬಟ್ಲರ್

-ನೇಮಿಚಂದ್ರ

ಇಂಗ್ಲೆಂಡಿನ 'ಮಹಿಳಾ ಸಂಘ-ಸಂಸ್ಥೆ'ಗಳ ಪಟ್ಟಿಯ ತುಂಬ ಕಣ್ಣಾಡಿಸುವಾಗ ಗಮನ ಸೆಳೆದದ್ದು 'ಜೋಸೆಫೀನ್ ಬಟ್ಲರ್ ಸೊಸೈಟಿ.' ಕಾರಣ ಈ ಸಂಘ ಆರಂಭವಾಗಿ ಒಂದೂಕಾಲು ಶತಮಾನದ ಮೇಲಾಗಿತ್ತು!

ಲಂಡನ್, ಏಪ್ರಿಲ್ ತಿಂಗಳು, 'ಜೋಸೆಫೀನ್ ಬಟ್ಲರ್ ಸೊಸೈಟಿ'ಯ ಶ್ರೀಮತಿ ವ್ಯಾಲೆರಿ ಗೋರೆಯವರಿಗೆ ಫೋನ್ ಮಾಡಿದೆ. ಕ್ಯಾಂಟರ್‌ಬರಿಯ ತಮ್ಮ ಮನೆಗೆ ನನ್ನನ್ನು, ಹೇಮಲತಾ ಮಹಿಷಿಯವರನ್ನು ಪ್ರೀತಿಯಿಂದ ಆಹ್ವಾನಿಸಿದರು. ಲಂಡನ್‌ನಿಂದ ಸುಮಾರು ಎರಡೂಕಾಲು ಗಂಟೆಯ ಪ್ರಯಾಣ. ಕ್ರೈಸ್ತರ ಪವಿತ್ರ ಯಾತ್ರಾ ಸ್ಥಳವಾದ ಕ್ಯಾಂಟರ್‌ಬರಿ ಇತಿಹಾಸದಾಳಕ್ಕೆ ಎಳೆದೊಯ್ಯುವ ಸುಂದರ ತಾಣ. ಊರ ಹೊರವಲಯದಲ್ಲಿ ಗೋರೆಯವರ 'ನೀಲ್ಸ್‌ಪ್ಲೇಸ್ ಫಾರ್ಮ್' ಮನೆ. ಪ್ರಕೃತಿಯ ನಟ್ಟನಡುವೆ, ಹೂ ಗಿಡ ಮರ ಬಳ್ಳಿ, ಹುಲ್ಲುಗಾವಲಿನ ಮಧ್ಯೆ ಮಲಗಿದ, ನಸು ಗುಲಾಬಿ ಬಣ್ಣದ ಮನೆಯ ಬಾಗಿಲು ತಟ್ಟಿದೆವು. ಹೊರಬಂದ ಗೋರೆ, ಅಪ್ಪಿ ಮುತ್ತಿಟ್ಟು ಸ್ವಾಗತಿಸಿದರು. ಅವರೊಡನೆ ಶ್ರೀಮತಿ ಹೆಲೆನ್ ಅವರೂ ಇದ್ದರು. ಇಬ್ಬರೂ ಮಧ್ಯವಯಸ್ಸು ದಾಟಿನಿಂತ ಮಹಿಳೆಯರು. ಆದರೆ ತುಂಬು ಉತ್ಸಾಹ, ಚಟುವಟಿಕೆ, ಲವಲವಿಕೆಯ ಮಹಿಳೆಯರು. ಅವರ ಸಂಘಟನೆಯ ಹೋರಾಟದ ಆದ್ಯ ವಿಷಯಗಳನ್ನು ಕೇಳಿದಾಗ ಅವು ವೇಶ್ಯಾ ಸಮಸ್ಯೆಗೆ ಸಂಬಂಧಿಸಿದ್ದವು. ಸಾಮಾಜಿಕ ನ್ಯಾಯ ಮತ್ತು ಸ್ತ್ರೀ ಪುರುಷರ ಸಮಾನತೆಯತ್ತ ಹೋರಾಡುತ್ತಿರುವ ಸಂಸ್ಥೆ ಇದು. ಹೆಣ್ಣು ಮಕ್ಕಳ ಮಾರಾಟವನ್ನು ತಡೆಗಟ್ಟುವತ್ತ ಅವರ ಯತ್ನವಿತ್ತು. ಕಾಯಿದೆಗಳ ಮೂಲಕ ಬಾಲಕಿಯರ 'ಸಮ್ಮತಿಸಬಲ್ಲ ವಯಸ್ಸ'ನ್ನು ಕೆಳಗಿಳಿಸುವುದು, ವೇಶ್ಯಾವೃತ್ತಿಯನ್ನು ಲೈಸೆನ್ಸ್ ನೀಡಿ ನೆಲೆಗೊಳಿಸುವುದು, ಸ್ತ್ರೀ ಪುರುಷರ ನಡುವೆ ನೈತಿಕತೆಯ ಹೆಸರಲ್ಲಿ ಅಸಮಾನತೆಯ ಕಾಯಿದೆಗಳನ್ನು ಹೇರುವುದು, ಈ ಎಲ್ಲದರ ವಿರುದ್ಧ ಅವರ ಹೋರಾಟ ಎಂದು ತಿಳಿದಾಗ ಕೊಂಚ ಅಚ್ಚರಿಯಾಯಿತು. 1869ರಲ್ಲಿ ಆರಂಭವಾದ, ಆ ವಿಕ್ಟೋರಿಯನ್ ಕಾಲದಲ್ಲಿ ಇಂಥಾ ಸಮಸ್ಯೆಗಳ ವಿರುದ್ಧ ಮಹಿಳೆಯರು ಹೇಗೆ ಸಂಘಟಿತರಾಗಿ ಹೋರಾಡಿದರು ಎಂಬ ವಿಷಯವೇ ಕುತೂಹಲ ಕೆರಳಿಸಿತು. ಆಗ ಗೋರೆಯವರು, ಸಂಸ್ಥೆಯನ್ನು ಸ್ಥಾಪಿಸಿದ ಹತ್ತೊಂಭತ್ತನೇ ಶತಮಾನದ ಸಮಾಜ ಸುಧಾರಕಿ 'ಜೋಸೆಫೀನ್ ಬಟ್ಲರ್' ಅವರ ಕತೆ ಹೇಳಿದರು.

ವಿಕ್ಟೋರಿಯನ್ ಯುಗದಲ್ಲಿ 'ಪತಿತೆ'ಯರ ಸ್ಥಿತಿಯ ಬಗ್ಗೆ ಕಳಕಳಿ ವ್ಯಕ್ತ ಪಡಿಸಲು, ವೇಶ್ಯೆಯರ ಹಕ್ಕುಗಳಿಗಾಗಿ ಹೋರಾಡಲು ಅಗಾಧ ಧೈರ್ಯ ಮತ್ತು ಸಾಹಸದ ಅಗತ್ಯವಿತ್ತು. ಜೋಸೆಫೀನ್ ಬಟ್ಲರ್ ವೇಶ್ಯೆಯರ ಪರವಾಗಿ ಇನ್ನಿಲ್ಲದಂತೆ ಹೋರಾಡಿದಾಕೆ, ಲಿಂಗಭೇದನೀತಿಗಳ ವಿರುದ್ಧ ಒಂದೂವರೆ ಶತಮಾನಗಳ ಹಿಂದೆಯೇ ದನಿಯೆತ್ತಿದವಳು. ಜೋಸೆಫೀನ್ ಬಟ್ಲರ್ ಆಂಗ್ಲ ಸ್ತ್ರೀವಾದಿ, ಸಕ್ರಿಯ ಸಮಾಜ ಸೇವಕಿ. ಈಕೆ ನಾರ್ತ್ ಅಂಬರ್ಲ್ಯಾಂಡ್‌ನಲ್ಲಿ 1828ರಲ್ಲಿ ಜನಿಸಿದರು. ಸಾಕಷ್ಟು ಶ್ರೀಮಂತ ಪ್ರಭಾವಶಾಲಿ, ಭೂಮಾಲಿಕರ ಕುಟುಂಬದಲ್ಲಿ ಹುಟ್ಟಿದಾಕೆ. ತಂದೆ ಜಾನ್ ಗ್ರೇ, ಕೃಷಿ ಸುಧಾರಣೆಯಲ್ಲಿ ತೊಡಗಿದವ, ಗುಲಾಮಗಿರಿ ಪದ್ಧತಿಯನ್ನು ರದ್ದು ಮಾಡುವತ್ತ ವಾದಿಸಿದವ. ಏಳು ಮಕ್ಕಳಲ್ಲಿ ಕಡೆಯವಳಾಗಿ, ಮುದ್ದಿನವಳಾಗಿ ಬೆಳೆದವಳು ಜೋಸೆಫೀನ್. ಜೋಸೆಫೀನ್ ತಾಯಿಯಿಂದ ವಿದ್ಯಾಭ್ಯಾಸ ಪಡೆದಳು. ಅಲ್ಪಕಾಲ ನ್ಯೂಕ್ಯಾಸಲ್‌ನಲ್ಲಿ ಶಾಲೆಗೆ ಹೋದದ್ದೂ ಉಂಟು. ಬಾಲ್ಯದಿಂದಲೂ ಆಕೆ ಬೆಳೆದ ಪರಿಸರ, ರಾಜಕೀಯ ವಾದ-ವಿವಾದಗಳನ್ನು ಕುರಿತು ಸಾಕಷ್ಟು ಮಾಹಿತಿ, ಜ್ಞಾನಗಳಿಸಲು ಪೂರಕವಾಗಿತ್ತು.



1950ರಲ್ಲಿ ಜೋಸೆಫೀನ್, ಜಾರ್ಜ್ ಬಟ್ಲರ್ ಅವರನ್ನು ಭೇಟಿಯಾದಳು. ಆತ ಡುರ್ಹಾಮ್ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕ. 1952ರಲ್ಲಿ ವಿವಾಹವಾದ ಮೇಲೆ ಅವರು ಆಕ್ಸ್‌ಫರ್ಡ್‌ನಲ್ಲಿ ಬಂದು ನೆಲೆಸಿದರು. ಇಲ್ಲಿ ಮಹಿಳೆಯರತ್ತ ವಿಶ್ವವಿದ್ಯಾಲಯಗಳಿಗಿದ್ದ ಪೂರ್ವಾಗ್ರಹಗಳು ಜೋಸೆಫೀನಳನ್ನು ಸಾಕಷ್ಟು ಕಾಡಿತ್ತು. 1857ರಲ್ಲಿ ಜೋಸೆಫೀನ್ ಓರ್ವ ಯುವತಿಯೊಡನೆ ಆಕೆಯ ಸ್ನೇಹ ಬೆಳೆಯಿತು. ಆ ಯುವತಿ ಪ್ರತಿಷ್ಠಿತ ವ್ಯಕ್ತಿಯೊಡನೆ, ವಿವಾಹೇತರ ಸಂಬಂಧದಲ್ಲಿ ಹುಟ್ಟಿದ ಕೂಸನ್ನು ಕೊಂದು ಹಾಕಿದ್ದ ಕಾರಣ ಜೈಲು ಶಿಕ್ಷೆಗೆ ಗುರಿಯಾಗಿದ್ದಳು. ಈ ಎರಡು ಘಟನೆಗಳು ಜೋಸೆಫೀನ್‌ಗೆ ಬಡ ವೇಶ್ಯೆಯರಿಗೆ, 'ಪತಿತೆ'ಯರಿಗೆ ಸಹಾಯ ಮಾಡುವಂತೆ ಸ್ಫೂರ್ತಿ ನೀಡಿತು, ಪ್ರೇರೇಪಿಸಿತು. ಅಷ್ಟೇ ಅಲ್ಲ ವೇಶ್ಯಾವೃತ್ತಿಯ ಸಾಮಾಜಿಕ ಹಾಗೂ ಆರ್ಥಿಕ ಕಾರಣಗಳನ್ನು ಶೋಧಿಸಲು ಹಚ್ಚಿತು. ಆ ಕಾಲಕ್ಕೆ ಇದು ತೀರಾ ಭಂಡ ಧೈರ್ಯದ ಕೆಲಸವಾಗಿತ್ತು. ಕುಲೀನ ಮನೆತನದ

ಗೌರವಾನ್ವಿತ ಹೆಂಗಸರು ವೇಶ್ಯೆಯರ ಪರ ಮಾತನಾಡುವುದಾಗಲೀ, ಅವರ ಹಕ್ಕುಗಳಿಗಾಗಿ ಬೀದಿಗಿಳಿದು ಹೋರಾಡುವುದಾಗಲೀ ಕಲ್ಪಿಸಲೂ ಸಾಧ್ಯವಿರಲಿಲ್ಲ. ಈಕೆಯನ್ನು ಎಲ್ಲ ರೀತಿಯ ತುಚ್ಛಪದ-ಗಳಿಂದ ನಿಂದಿಸಿದರು. ಆದರೆ ಈ ಯಾವ ಸಾಮಾಜಿಕ ಏಳುಬೀಳುಗಳು ಆಕೆಯನ್ನು ಅಳುಕಿಸಲಿಲ್ಲ. ಜೊತೆಗೆ ಜೋಸೆಫೀನ್‌ರ ಹೋರಾಟಕ್ಕೆ ಪತಿಯ ಬೆಂಬಲವಿತ್ತು. ಅವರದು ಸುಗಮವಾಗಿ ಸಾಗಿದ, ಸುಖೀ ದಾಂಪತ್ಯ. ಜೋಸೆಫೀನ್ ಆಯ್ದ ಹಾದಿ ಕಲ್ಲು ಮುಳ್ಳಿನದಾಗಿತ್ತು. ಆಕೆಯ ಬದುಕಿನ ಬಿರುಗಾಳಿಗಳಲ್ಲಿ ಪತಿಯ ಸಾಂಗತ್ಯ, ಸಹಕಾರ ಜೋಸೆಫೀನ್‌ಗೆ ಅತ್ಯಂತ ಸಹಾಯಕಾರಿಯಾಗಿತ್ತು.

ಜೋಸೆಫೀನ್‌ಗೆ ಓರ್ವ ಪುಟ್ಟ ಮಗಳಿದ್ದಳು. ಆದರೆ 1864ರಲ್ಲಿ ಐದು ವರ್ಷದ ಆ ಕೂಸು ಆಕಸ್ಮಿಕದಲ್ಲಿ ತೀರಿಕೊಂಡಿತು. ಅದೇ ವರ್ಷ ಇವರುಗಳು ಲಿವರ್‌ಪೂಲ್‌ಗೆ ಬಂದರು. ಜೋಸೆಫೀನ್ ತನ್ನ ವೈಯುಕ್ತಿಕ ದುರಂತವನ್ನು, ಸಾರ್ವತ್ರಿಕ ಹೋರಾಟದಲ್ಲಿ ಮರೆಯ-ಲೆತ್ನಿಸಿದಳು. ತನ್ನ ಉದಾರ ಮನಸ್ಸಿನ ಸೇವಾ ಕಾರ್ಯಗಳನ್ನು ದ್ವಿಗುಣಗೊಳಿಸಿದಳು. ಮಹಿಳಾ ಹಕ್ಕುಗಳಿಗಾಗಿ ತೀವ್ರವಾಗಿ ವಾದಿಸಿದ ಈಕೆಯದು, 'ಪತಿತ' ಮಹಿಳೆಯರ ಬಗ್ಗೆ ಬರಿಯ ಬಾಯಿಮಾತಿನ ಅನುಕಂಪವಾಗಿರಲಿಲ್ಲ. ಪತಿ ಗೌರವಾನ್ವಿತ ಪ್ರಾಧ್ಯಾಪಕ ಪದವಿಯ-ಲ್ಲಿದ್ದಾಗಲೂ, ತನ್ನ ಲಿವರ್‌ಪೂಲ್‌ನ ಮನೆಯೊಳಗೆ 'ಪತಿತೆ'ಯರನ್ನು, ಅನಾಥ ಮಹಿಳೆಯರನ್ನು ಸ್ವಾಗತಿಸಿದಳು. ರೋಗಗ್ರಸ್ಥ ವೇಶ್ಯೆಯರಿಗೆ ಆಶ್ರಯ ಒದಗಿಸಿಕೊಟ್ಟಳು. ಜೈಲುಗಳಿಗೆ, ವೇಶ್ಯಾಗೃಹಗಳಿಗೆ ಭೇಟಿ ನೀಡಿದಳು. ವಾಸಿಯಾಗದ ರೋಗದಿಂದ ನರುಳುವವರಿಗಾಗಿಯೇ ಹತ್ತಿರದಲ್ಲಿ ಒಂದು ನಿವಾಸವನ್ನೂ ಸ್ಥಾಪಿಸಿದಳು.

1869ರಲ್ಲಿ ಜೋಸೆಫೀನ್ ಬರೆದ 'ವುಮೆನ್ಸ್ ವರ್ಕ್ ಅಂಡ್ ವುಮೆನ್ಸ್ ಕಲ್ಚರ್' ಎಂಬ ಲೇಖನ, ಒಂದು ಸಣ್ಣ ಸುಧಾರಣಾವಾದಿ ಗುಂಪಿನ ಗಮನವನ್ನು ಸೆಳೆಯಿತು. ಈ ಗುಂಪಿಗೆ ಸೇರ್ಪಡೆಯಾದ ಜೋಸೆಫೀನ್, ಅದೇವರ್ಷ 'ಲೇಡೀಸ್ ನ್ಯಾಷನಲ್ ಅಸೋಸಿ-ಯೇಷನ್'ನ ಮುಖಂಡತ್ವವನ್ನು ವಹಿಸಿ, ವೇಶ್ಯಾವೃತ್ತಿಯನ್ನು ಕುರಿತಂತೆ ಸರಕಾರದ ಲಿಂಗತಾರತಮ್ಯ ಕಾಯಿದೆಯಾದ 'ಸಾಂಕ್ರಾಮಿಕ ರೋಗ ಶಾಸನ'ದ (Contagious Diseases Act) ಮುಂದುವರಿಕೆಯನ್ನು ಪ್ರತಿಭಟಿಸಿ ಚಳುವಳಿ ಹೂಡಿದಳು. ಲೈಂಗಿಕ ರೋಗವನ್ನು ತಡೆಗಟ್ಟುವ ನೆಪದಲ್ಲಿ, ಈ ಕಾಯಿದೆಯನ್ನು ಜಾರಿಗೆ ತರಲಾಗಿತ್ತು. ಈ ಕಾಯಿದೆಯ ಪ್ರಕಾರ, ನೌಕಾ ಪಡೆ, ಸೇನಾ ಪಡೆಗಳಿರುವ ಜಾಗದಲ್ಲಿರುವ ಯಾವುದೇ ಮಹಿಳೆಯನ್ನೂ ಪೊಲೀಸರು 'ಸಾಮಾನ್ಯ ವೇಶ್ಯೆ' ಎಂದು ಪರಿಗಣಿಸಿ, ವೈದ್ಯಕೀಯ ತಪಾಸಣೆಗೆ ಒತ್ತಾಯಪಡಿಸಬಹುದಿತ್ತು. ಜೈಲಿಗೆ ಅಟ್ಟಬಹುದಿತ್ತು. ಅದೇ ಸ್ಥಳದ ಪುರುಷರಿಗೆ ಈ ಕಾಯಿದೆಯ ಕಟ್ಟುಪಾಡಿರಲಿಲ್ಲ. ಅವರಿಗೆ ಯಾವ ವೈದ್ಯಕೀಯ ತಪಾಸಣೆಯ ಕಡ್ಡಾಯವಿರಲಿಲ್ಲ. 1864, 1866, 1869ರಲ್ಲಿ ಪಾಸ್ ಆದ ಈ ಶಾಸನಗಳು, ವೇಶ್ಯೆಯರೆಲ್ಲ ಕಡ್ಡಾಯವಾಗಿ ತಮ್ಮ ಹೆಸರನ್ನು ರಿಜಿಸ್ಟರ್ ಮಾಡಬೇಕು. ಲೈಸೆನ್ಸ್ ಪಡೆದಿರಬೇಕು, ಹಾಗೂ ಕಡ್ಡಾಯವಾಗಿ ವೈದ್ಯಕೀಯ ತಪಾಸಣೆಗೆ ಒಳಗಾಗಬೇಕೆಂದು ಒತ್ತಡ ತಂದಿತ್ತು. ಮುಗ್ಧ ನಿರಪರಾದಿ ಮಹಿಳೆಯರನ್ನೂ 'ವೇಶ್ಯೆ' ಎಂದು ಅನುಮಾನಿಸಿ ತಪಾಸಣೆಗೆ ಅಟ್ಟುವ ಅಧಿಕಾರವನ್ನು ಪೊಲೀಸರಿಗೆ ನೀಡಿತ್ತು. ಈ ನೀತಿ ಸಂಹಿತೆ ಸ್ಪಷ್ಟವಾಗಿ ಸ್ತ್ರೀವಿರೋಧಿ ಕಾಯಿದೆಯಾಗಿದ್ದು, ದ್ವಿಮುಖ ಧೋರಣೆಯದಾಗಿತ್ತು. ಈ ಕಾಯಿದೆಯ ವಿರುದ್ಧ ಗಟ್ಟಿ ದನಿಯೆತ್ತಿ ಹೋರಾಡಿದ ಜೋಸೆಫೀನ್, ದುಡಿವ ಪುರುಷರ ಸಂಘಟನೆಯನ್ನೂ ಕೂಡಿಸಿ ತನ್ನ ಹೋರಾಟಕ್ಕೆ ಬೆಂಬಲ ಪಡೆದಳು. 1870ರಲ್ಲಿ ಚುನಾವಣೆಗೆ ನಿಂತಿದ್ದ, ಈ ಕಾಯಿದೆಯನ್ನು ಬೆಂಬಲಿಸಿದ್ದ ಸರಕಾರಿ ಅಭ್ಯರ್ಥಿಯನ್ನು ಕಟುವಾಗಿ ಟೀಕಿಸಿ, ಆತನ ವಿರುದ್ಧ ಸಾಕಷ್ಟು ಪ್ರಚಾರ ಮಾಡಿದ್ದು, ಆತನ ಚುನಾವಣಾ ಸೋಲಿಗೆ ಕಾರಣವಾಯಿತು. ಜೋಸೆಫೀನ್, 1869ರಿಂದ 1885ರ ವರೆಗೆ ಈ ಕಾಯಿದೆಯನ್ನು ರದ್ದು ಮಾಡಿಸಲು ಸತತವಾಗಿ ಹೋರಾಡಿದಳು. ಈ ಕಾರ್ಯದಲ್ಲಿ, ತನ್ನ ದಿಟ್ಟತನ, ಧೈರ್ಯ, ಬರೆಯುವ ಸಾಮರ್ಥ್ಯ, ತನ್ನ ಕುಟುಂಬದಿಂದ ಗಳಿಸಿದ್ದ ರಾಜಕೀಯ ಸಂಪರ್ಕ ಎಲ್ಲವನ್ನೂ ಬಳಸಿಕೊಂಡು ಅಂತೂ 1886ರಲ್ಲಿ ಕಾಯಿದೆ ರದ್ದಾಗುವಂತೆ ಮಾಡಿದಳು. ಇದು ಆಕೆಯ ಬದುಕಿನ ಮಹತ್ತರ ಸಾಧನೆಯಾಗಿತ್ತು.

ಜೋಸೆಫೀನ್ ಉಳಿದ ಚಳುವಳಿಗಳಲ್ಲೂ ಸಕ್ರಿಯವಾಗಿ ಭಾಗವಹಿಸಿದಳು. 1874ರಿಂದ ಯುರೋಪ್ ಖಂಡವನ್ನು ಅನೇಕ ಬಾರಿ ಸುತ್ತಿ, ವೇಶ್ಯಾವೃತ್ತಿ ಮತ್ತು 'ವೈಟ್ ಸ್ಲೇವ್ ಟ್ರಾಫಿಕ್' ಎಂದು ಹೆಸರಾದ ಬಿಳಿ ಹೆಣ್ಣುಗಳ ಮಾರಾಟದ ವಿರುದ್ಧ ಅಂತರಾಷ್ಟ್ರೀಯ ಮಟ್ಟದ ಪ್ರತಿಭಟನೆಯ ವ್ಯವಸ್ಥೆ ಮಾಡಿದಳು. 1885ರಲ್ಲಿ 'ಕ್ರಿಮಿನಲ್ ಲಾ ಅಮೆಂಡ್ಮೆಂಟ್ ಬಿಲ್' ವಿರುದ್ಧವಾಗಿಯೂ ಚಳುವಳಿ ನಡೆಸಿದಳು. ಆ ಬಿಲ್ ಪಾಸಾಗದಿರಲೆಂದು ಸಾರ್ವಜನಿಕವಾಗಿ ಮಂಡಿಯೂರಿ ಪ್ರಾರ್ಥನೆಗಿಳಿದಳು. ಈ ಬಿಲ್ ಪಾಸಾಗಿದ್ದರೆ, ಎಳೆಯ ಹುಡುಗಿಯರು ಸಮ್ಮತಿ ನೀಡಬಲ್ಲ ವಯಸ್ಸನ್ನು (age of consent) ಮತ್ತಷ್ಟು ಕಡಮೆ ಮಾಡಿ, ಈ ಮೂಲಕ ಹೆಣ್ಣು ಮಕ್ಕಳ ಮಾರಾಟದ ದಂಧೆಯನ್ನು ಯಾವ ರೀತಿಯಲ್ಲಿ ತಡೆಯಲೂ ಸಾಧ್ಯವಿಲ್ಲದಂತಾಗುತ್ತಿತ್ತು. ಅಷ್ಟೇ ಅಲ್ಲ ಜೋಸೆಫೀನ್, 'ಪಾಲ್ ಮಾಲ್ ಗೆಜೆಟ್'ನ ಪ್ರಭಾವಿ ಸಂಪಾದಕ ಡಬ್ಲ್ಯು.ಟಿ. ಸ್ಟೀಡ್‌ನನ್ನು ಭೇಟಿ ಮಾಡಿ, ಈ ಎಲ್ಲ ಭಯಂಕರ ಸತ್ಯಗಳನ್ನು, ಈ ಕಾಯಿದೆಯ ಪರಿಣಾಮಗಳನ್ನು ವಿವರಿಸಿ, ಅವೆಲ್ಲವೂ ಪತ್ರಿಕೆಯಲ್ಲಿ ಪ್ರಕಟಗೊಳ್ಳುವಂತೆ ಮಾಡಿದಳು. ತನ್ನ ವರದಿಯಲ್ಲಿ ಆತ ಐದು ಪೌಂಡು ಕೊಟ್ಟು ಹನ್ನೆರಡು ವರ್ಷದ ಹುಡುಗಿಯನ್ನು ಎಷ್ಟು ಸುಲಭವಾಗಿ ಕೊಂಡುಕೊಳ್ಳಲು ಸಾಧ್ಯವಾಯಿತೆಂಬ ಸತ್ಯ

ಘಟನೆಯನ್ನೂ ವಿವರಿಸಿದ್ದ. (ನಮ್ಮ ನೆಲದ ಈ ಶತಮಾನದ 'ಕಮಲೆ'ಯರ ಕತೆ ನೆನಪಾಗುವುದಲ್ಲವೆ?) ಈ ಲೇಖನ ಸಾರ್ವಜನಿಕರ ಗಮನವನ್ನು ಇತ್ತ ಸೆಳೆದದ್ದಲ್ಲದೆ, ಆ ಬಿಲ್ ಸೋಲುವಂತೆ ಮಾಡಲು ಸಹಾಯಕವಾಯಿತು.

ಜೋಸೆಫೀನ್ ಶಿಕ್ಷಣ ರಂಗದ ಚಳುವಳಿಗೂ ಸೆಳೆಯಲ್ಪಟ್ಟು, 'ನಾರ್ತ್ ಆಫ್ ಇಂಗ್ಲೆಂಡ್ ಕೌನ್ಸಿಲ್ ಫಾರ್ ದಿ ಹೈಯರ್ ಎಜುಕೇಶನ್ ಫಾರ್ ವುಮೆನ್'ಗೆ 1868ರಿಂದ 1873ರ ವರೆಗೆ ಅಧ್ಯಕ್ಷಳಾಗಿ ಮಹಿಳೆಯರ ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ದುಡಿದಳು.

ಜೋಸೆಫೀನ್ ತನ್ನ ಹೋರಾಟದ ಆತ್ಮಕತೆಯನ್ನು 1896ರಲ್ಲಿ ಪ್ರಕಟವಾದ 'Personal reminiscence of a great crusade' ಎಂಮ ಪುಸ್ತಕದಲ್ಲಿ ಬರೆದಿದ್ದಾಳೆ. ಅನೇಕ ಲೇಖನಗಳನ್ನು, ಪುಸ್ತಕಗಳನ್ನು ಪ್ರಕಟಿಸಿದ ಜೋಸೆಫೀನ್, 1906ರಲ್ಲಿ ಕೊನೆಯುಸಿರು ಎಳೆಯುವವರೆಗೂ, ತಾನು ಸ್ವತಃ ಹೊರತರುತ್ತಿದ್ದ 'ದಿ ಡಾನ್' ಮತ್ತು 'ದಿ ಸ್ಟಾರ್ಮ್ ಬೆಲ್' ಪತ್ರಿಕೆಗಳ ಸಂಪಾದಕ ಕೆಲಸವನ್ನು ಮುಂದುವರೆಸಿದ್ದಳು.

ಜೋಸೆಫೀನ್ ಬಟ್ಲರ್ ತೋರಿದ ದಿಟ್ಟ ಹಾದಿಯಲ್ಲಿ ಆಕೆ ಸ್ಥಾಪಿಸಿದ ಸಂಸ್ಥೆ, ಇಂದಿಗೂ ಮಹಿಳಾ ಸಮಾನತೆಗಾಗಿ, ಲಿಂಗ ತಾರತಮ್ಯ ನೀತಿಗಳ ವಿರುದ್ಧವಾಗಿ ಹೋರಾಟ ಮುಂದುವರೆಸಿದೆ.

*

---

# ಸ್ವಾತಂತ್ರ್ಯ ಹೋರಾಟ ಮತ್ತು ಮಹಿಳೆ : ಒಂದು ಟಿಪ್ಪಣಿ

ಮಹಿಳೆಯರು ಗಾಂಧೀಜಿಯವರ ನಾಯಕತ್ವದ ಸ್ವರಾಜ್ಯ ಸಂಘರ್ಷದಲ್ಲಿ ಪಾಲುಗೊಳ್ಳಲು ದೊಡ್ಡ ಪ್ರಮಾಣದಲ್ಲಿ ಮುಂದಾದದ್ದು ಈ ದೇಶದಲ್ಲಿ ಮಹಿಳಾ ಜಾಗೃತಿಯ ಸ್ವರೂಪ ಮತ್ತು ಬೆಳವಣಿಗೆಗಳನ್ನು ನಿರ್ಧರಿಸಿದ ಪ್ರಮುಖ ಅಂಶಗಳಲ್ಲಿ ಒಂದು.

ಸ್ತ್ರೀಯರು ಭಾವನಾತ್ಮಕತೆಯ ನೆಲೆಯಿಂದ ಒಂದು ಚಳವಳಿಗೆ ಎಂಥ ಶಕ್ತಿ ತರಬಲ್ಲರೆಂಬುದರ ಮೊದಲ ಅನುಭವ ಗಾಂಧಿಯವರಿಗೆ ಆದದ್ದು ದಕ್ಷಿಣ ಅಮೇರಿಕಾದಲ್ಲಿ. 1913 ರಲ್ಲಿ ಅಲ್ಲಿನ ಸುಪ್ರೀಂ ಕೋರ್ಟ್ ಹಿಂದೂ, ಮುಸ್ಲಿಂ ಮತ್ತು ಫಾರ್ಸಿ ಮದುವೆಗಳನ್ನು ಅಸಿಂಧುವೆಂದು ತೀರ್ಪು ನೀಡಿದಾಗ ಅಲ್ಲಿನೆಲೆಸಿದ್ದ ಭಾರತೀಯ ಸ್ತ್ರೀಪುರುಷರೆಲ್ಲ ಒಟ್ಟಾಗಿ ಅದರ ವಿರುದ್ಧ ಸತ್ಯಾಗ್ರಹ ನಡೆಸಿದ್ದರು. ಸ್ವ ಇಚ್ಛೆಯಿಂದ ಸೆರೆವಾಸಕ್ಕೆ ಹೋಗುವ, ಕಷ್ಟಗಳೆದುರು ಅಂಜದ, ಮನೆ ಮಕ್ಕಳಿಂದ ಅಗಲುವ ಸ್ಥಿತಿಗಳೆದುರು ಸ್ತ್ರೀಯರೇನೂ ಧೃತಿಗೆಡಲಾರರು ಎಂಬುದನ್ನು ಮೊದಲಬಾರಿಗೆ ಗಾಂಧಿ ಆಗ ಕಂಡುಕೊಂಡರು.

ಈ ಅನುಭವವೇ ದೇಶದ ಸ್ವಾತಂತ್ರ್ಯ ಆಂದೋಳನವನ್ನೂ ಮಹಿಳಾ ಆಂದೋಳನವನ್ನು ಒಗ್ಗೂಡಿಸುವ ಮುಂದಿನ ಪ್ರಯತ್ನಗಳಿಗೆ ನಾಂದಿಹಾಡಿತು. 1921ರಲ್ಲಿ ಮೊದಲ ಬಾರಿ ಅಸಹಕಾರ ಚಳವಳಿಗೆ ಗಾಂಧೀಜಿ ಕರೆನೀಡಿದಾಗ ಮಹಿಳೆಯರನ್ನು ಪ್ರಜ್ಞಾಪೂರ್ವಕವಾಗಿಯೇ ಅದರಲ್ಲಿ ತೊಡಗಿಸಿಕೊಂಡರು. ಸರ್ಕಾರ ಮತ್ತು ಅದರ ನೀತಿಗಳನ್ನು ಶಾಂತರೀತಿಯಿಂದ ವಿರೋಧಿಸಲಿಕ್ಕಾಗಿ ಸರ್ಕಾರಿ ಶಿಕ್ಷಣ ಸಂಸ್ಥೆಗಳು, ನ್ಯಾಯಾಲಯ, ಶಾಸನ ಸಭೆಗಳನ್ನು ಬಹಿಷ್ಕರಿಸಿರೆಂದು ಅವರು ಕಾಂಗ್ರೆಸ್ಸಿಗರಿಗೆ ಕರೆ ನೀಡಿದ್ದರು. ಬ್ರಿಟಿಷ್ ವಸ್ತುಗಳ ಬಹಿಷ್ಕಾರ, ನೂಲುವಿಕೆ ಮತ್ತು ಖಾದಿಬಟ್ಟೆ ಧರಿಸುವುದು ಈ ಅಸಹಕಾರದ ರಚನಾತ್ಮಕ, ದೇಶೀ ವಿಧಾನವಾಗಿತ್ತು. ಈ ರಚನಾತ್ಮಕ ಕಾರ್ಯಗಳಲ್ಲೇ ಮಹಿಳೆಯರ ಪಾಲ್ಗೊಳ್ಳುವಿಕೆ ವಿಸ್ತರಿಸಿತು. ಮನೆ ಕೆಲಸಗಳನ್ನೇನೂ ಬದಿಗೆ ಸರಿಸದೆ, ತೀರ ನಿಧಾನವಾಗಿ ನಿಶ್ಶಬ್ದವಾಗಿ ತಾಳ್ಮೆ ಮತ್ತು ತ್ಯಾಗಗಳಿಂದ ನಿರ್ವಹಿಸಬೇಕಾದ ನೂಲುವ ಕಾರ್ಯ ಭಾರತೀಯ ಹೆಣ್ಣಿನ ಜೀವನಗತಿಗೆ ಹೇಳಿ ಮಾಡಿಸಿದಂತಿತ್ತು.

ಮಹಿಳೆಯರು ಕುಟುಂಬದ ಸಂರಕ್ಷಕಿಯರಾಗಿ, ಪುರುಷರಿಗೆ ಸಹಕಾರಿಗಳಾಗಿ, ತಮ್ಮ ಮನೆಯ ನೆಲೆಗಳಲ್ಲಿ ನಿರ್ವಹಿಸಬೇಕಾಗಿದ್ದ ಸಾಂಪ್ರದಾಯಿಕ ಪಾತ್ರವನ್ನು ಗಾಂಧೀಜಿ ಪ್ರಶ್ನಿಸಲಿಲ್ಲ. ಆದರೆ ದೇಶದ ಸಾಮಾಜಿಕ ಮತ್ತು ರಾಜಕೀಯ ಬಿಡುಗಡೆಗೆ ಸ್ತ್ರೀಯರು ಅತ್ಯವಶ್ಯಕ ತಳಹದಿಯೆಂಬುದನ್ನು ಅವರು ಜನತೆಗೆ ಮನದಟ್ಟು ಮಾಡಿಸಲು ನಿರಂತರ ಶ್ರಮಿಸಿದರು. ವಿಶೇಷವಾಗಿ ಸ್ತ್ರೀಯರಲ್ಲಿ ಈ ಬಗ್ಗೆ ಎಚ್ಚರ ಮೂಡಿಸಲು

ಬಹುಮುಖವಾಗಿ ಅವರು.ಯತ್ನಿಸಿದ್ದು ಗಮನಾರ್ಹ. ಭಾರತದ ಆರ್ಥಿಕ ಹಾಗೂ ನೈತಿಕ ಮುಕ್ತಿ ಸ್ತ್ರೀಯರ ಹೆಗಲ ಮೇಲಿದೆ ಎಂದು ಸಾರಿ, ಅರೆಗೆಲಸ, ಅರೆಹೊಟ್ಟೆ ಇಲ್ಲವೆ ಉಪವಾಸಗಳಲ್ಲೇ ಬದುಕುವ ಭಾರತದ ಸಾಮಾನ್ಯ ಸ್ತ್ರೀಯರಿಗೆ ಖಾದಿ, ಜೀವನೋಪಾಯ, ಉದ್ಯೋಗವೂ ಆಗಬಹುದು; ಸ್ವಾವಲಂಬನೆ ಮತ್ತು ಸ್ವದೇಶೀ ಚೈತನ್ಯದ ಲಕ್ಷಣವೂ ಆಗಬಹುದೆಂಬುದು ಅವರ ಎಣಿಕೆಯಾಗಿತ್ತು.

ವಸಾಹತುಶಾಹಿಯಡಿಯಲ್ಲಿ ಭಾರತದ ಪರಂಪರಾಗತ ಬಟ್ಟೆ ಗಿರಣಿ, ಉದ್ಯಮಗಳು ಮಹಿಳೆಯರೇ ನಿರ್ವಹಿಸುತ್ತಿದ್ದ, ಇಡೀ ಕುಟುಂಬಗಳ ಜೀವನಾಧಾರವಾಗಿದ್ದ ಗುಡಿ ಕೈಗಾರಿಕೆಗಳೆಲ್ಲ ಅವನತಿ ಹೊಂದಿ, ಲಕ್ಷಗಟ್ಟಲೆ ಸ್ತ್ರೀಯರು ಜೀವನೋಪಾಯಗಳನ್ನು ಕಳೆದುಕೊಂಡಿದ್ದರು. ಈ ಮಹಿಳೆಯರು ಗಾಂಧಿಯವರ ಕರೆಗೆ ಸ್ಪಂದಿಸಿದ್ದರು. ಮಧ್ಯಮ ವರ್ಗದ ಮಹಿಳೆಯರಿಗೆ ಚರಖಾ ಕುಟುಂಬದ ಆದಾಯಕ್ಕೆ ಪೂರಕವಾಗಿದ್ದರೆ, ಬಡ ಮಹಿಳೆಯರಿಗೆ ಅದೇ ಜೀವನೋಪಾಯ. ಶಿಕ್ಷಕರೂ ಶ್ರೀಮಂತರೂ ಆದ ನಗರಗಳ ಮಹಿಳೆಯರಿಗೆ ದೇಶದ ಬಡ ಮಹಿಳೆಯರೊಂದಿಗೆ ತಮ್ಮನ್ನು ಗುರುತಿಸಿಕೊಳ್ಳಲು ಅಗತ್ಯವಾಗಿದ್ದ ಮಾನಸಿಕ ಕರ್ತವ್ಯ ಭಾವನೆ, ಜವಾಬ್ದಾರಿ ಮತ್ತು ತ್ಯಾಗದ ಹೆಮ್ಮೆಗಳನ್ನು ಚರಖಾ ಸಂಕೇತಿಸಿತ್ತು. ದೇಶದ ಸಾಮಾನ್ಯ ಜನರನ್ನು ನೇರವಾಗಿ ಮುಟ್ಟಬಲ್ಲ ಉತ್ತಮ ರಾಜಕೀಯ ಕ್ರಿಯಾವಿಧಾನ ಇದು ಎಂಬುದು ಗಾಂಧಿಯವರ ನಂಬಿಕೆಯಾಗಿತ್ತು. ಪರಾಡಳಿತದ ವಿರುದ್ಧ ಪ್ರತಿಭಟಿಸಲು, ಬಡ ಹಾಗೂ ಶೋಷಿತರ ಜೊತೆ ತಮ್ಮನ್ನು ತಾವು ಕಂಡುಕೊಳ್ಳಲು, ಸ್ವಾವಲಂಬನೆ ಸ್ವಾತಂತ್ರ್ಯದ ನಿರ್ಧಾರವನ್ನು ಮನಗಳಲ್ಲಿ ಬೇರೂರಿಸಲು ಖಾದಿ ಅಗತ್ಯಸಾಧನವಾಗಿ ಅವರಿಗೆ ಕಂಡಿತ್ತು.

ಭಾರತೀಯ ಕುಟುಂಬ ಎಲ್ಲ ಸಂಪ್ರದಾಯ ಶರಣತೆಯ ಸುಭದ್ರ ನೆಲೆ. ಈ ನೆಲೆಯ ತಳಪಾಯದಲ್ಲಿರುವ ಸ್ತ್ರೀ-ಪುರುಷರ ಶ್ರಮ ವಿಭಜನೆ, ಸ್ತ್ರೀಯರ ಆರ್ಥಿಕ ಅವಲಂಬಿತನೆಲೆ, ಅವರ ಕರ್ತವ್ಯಗಳ ಬಗೆಗಿದ್ದ ಪರಂಪರಾಗತ ನಂಬಿಕೆಗಳನ್ನು ಸ್ಪರ್ಶಿಸದೆಯೂ ಇಂಥ ಕುಟುಂಬವನ್ನೇ ಒಂದು ಘಟಕವೆಂದು ಸ್ವೀಕರಿಸಿ ಅದರೊಳಗೆ ಚೋದನೆಯುಂಟು ಮಾಡಬೇಕಾದದ್ದು ಗಾಂಧಿಯವರಿಗೆ ಅಗತ್ಯವಾಗಿ ಕಂಡಿತ್ತು. ಅಸ್ಪೃಶ್ಯತಾ ನಿವಾರಣೆ, ಕೋಮುವಾದದ ವಿರೋಧ, ದೇಶಕ್ಕಾಗಿ ಸ್ತ್ರೀಯರ ಆಭರಣ ತ್ಯಾಗ, ಅಹಿಂಸಾತ್ಮಕ ಶಸ್ತ್ರರಹಿತ ಪ್ರತಿಭಟನೆ ಮತ್ತು ಉಪ್ಪಿನ ಸತ್ಯಾಗ್ರಹಗಳೆಲ್ಲದರಲ್ಲೂ ಸ್ತ್ರೀಯರು ಸಹಜವಾಗಿ ಮುಂದಾಗಿ ಪಾಲುಗೊಳ್ಳುವುದು ಸಾಧ್ಯವಾಯಿತು. ಹೀಗೆ ಸಾಧ್ಯವಾದದ್ದು, ಗಾಂಧೀಜಿ ಸಾಂಪ್ರದಾಯಿಕ ಜನರ ಮನದಾಳದ ನಿಷ್ಠೆ ನಂಬಿಕೆಗಳಿಗೆ ದಾಳಿಯಿಡುವ ವಿಚಾರಗಳನ್ನು ಬಳಸಲಿಲ್ಲ ಎಂಬುದರಿಂದಲೇ.

ಈ ದೇಶದ ಮಹಿಳೆಯರ ಇರವು, ಬದುಕುವ ಕ್ರಮಗಳನ್ನು ಗಮನಕ್ಕೆ ತೆಗೆದುಕೊಂಡೇ ರೂಪಿತವಾಗಿದ್ದ ಗಾಂಧೀಜಿಯವರ ಹೋರಾಟಗಳಿಗೆ ಸ್ತ್ರೀಯರನ್ನು ''ಯಾತನೆ ಮತ್ತು ತ್ಯಾಗಗಳ ಪ್ರತೀಕ''ವೆಂದು ಅವರು ಬಲವಾಗಿ ನಂಬಿದ್ದುದು ಮುಖ್ಯ ಧೋರಣೆಯಾಗಿತ್ತು. ಒಂದು ಹಂತದ ವರೆಗೆ ಸ್ತ್ರೀಯರ ಶತಶತಮಾನಗಳ ಬದುಕಿನ ಗತಿಗೆ ಹಲವು ಬದಲಾವಣೆಗಳನ್ನು, ಹೆಚ್ಚಿನ ಘನತೆ, ಅರ್ಥವಂತಿಕೆಗಳನ್ನೂ ಅವರ ಹೋರಾಟವು ತಂದುಕೊಟ್ಟಿತು. ಸ್ವಾಯುತ್ತತೆ, ಸ್ವಾಭಿಮಾನಗಳ ಅರಿವನ್ನೂ ಮೂಡಿಸಿತು. ಆದರೆ ಸಾಮಾಜಿಕ ಕಾರ್ಯಕರ್ತರಾಗಿ, ಸುಧಾರಕಿಯರಾಗಿ ಅವರು ಉಳಿಯಬೇಕು. ಅದನ್ನು ಬಿಟ್ಟು ಪುರುಷರೊಂದಿಗೆ ಸಮಾನತೆಗಾಗಿ ಸ್ಪರ್ಧಿಸಿದಲ್ಲಿ ದೇಶದಲ್ಲಿ ಬರ್ಬರತೆ ತಲೆದೋರುತ್ತದೆ. ಎಂಬುದು ಅವರ ಒಟ್ಟು ತಾತ್ವಿಕ ನಿಲುವಾಗಿತ್ತು. ಸಾಮಾಜಿಕ ಮತ್ತು ನೈತಿಕ ಸ್ಥಿತಿಗಳ ಬದಲಾವಣೆಗೆ ನೀಡಿದಷ್ಟು ಮಹತ್ವವನ್ನು ಅವರು ಸ್ತ್ರೀಯರ ಭೌತಿಕ ಪರಿಸ್ಥಿತಿ ಬದಲಾಗಬೇಕಿದೆ ಎಂಬುದರತ್ತ ನೀಡಲಿಲ್ಲ. ಹೊರಗಿನವರಿಂದ ದೇಶಕ್ಕೆ ಒದಗಿದ್ದ ದಬ್ಬಾಳಿಕೆ, ಸಾಮಾಜಿಕ ಮತ್ತು ಕೌಟುಂಬಿಕ ನೆಲೆಗಳಲ್ಲಿ ಸ್ತ್ರೀಯರು ಅನುಭವಿಸುತ್ತಿದ್ದ ದಬ್ಬಾಳಿಕೆಗಳು ಕೇವಲ ಅಮೂರ್ತ ನೈತಿಕ ಸ್ಥಿತಿಯಲ್ಲ, ಉತ್ಪಾದನಾ ಸಂಬಂಧಗಳಿಗೂ ಅದಕ್ಕೂ ಬೆಸುಗೆಯಿದೆ ಎಂಬ ತಿಳಿವಳಿಕೆ ಗಾಂಧಿಯವರಿಗೆ ಇತ್ತು. ಆದರೂ ಅವರು ಉತ್ಪಾದನೆಯ 'ಹೊರಜಗತ್ತು' ಲೈಂಗಿಕತೆ, ಸಂತಾನೋತ್ಪತ್ತಿ ಮತ್ತು ಕುಟುಂಬದ ಒಳಲೋಕಗಳು ಹೇಗೆ ಕಟ್ಟಲ್ಪಟ್ಟಿವೆ ಎಂಬುದನ್ನೂ, ಆ ಸಮಸ್ಯೆಗಳನ್ನು ಹೇಗೆ ಬದಲಾಯಿಸಬೇಕು ಎಂಬುದನ್ನೂ ಗಮನಿಸದೆ ಕೇವಲ ಭಾವನಾತ್ಮಕ ನೆಲೆಯಲ್ಲಿ ಸ್ತ್ರೀಯರ ಸ್ಥಿತಿಗಳ ಪರಿವರ್ತನೆಗೆ ಪ್ರಯತ್ನಿಸಿದ್ದರು. ಇದು ಅವರ ನೇತೃತ್ವದ ಸ್ವರಾಜ್ಯ ಚಳವಳಿಯ ಪರಿಮಿತಿಯೂ ಆಗಿತ್ತು ಎನ್ನಬಹುದು.

-ಸುಮಿತ್ರ

# ಸಮಕಾಲೀನ ಮಹಿಳಾ ಚಳವಳಿ : ನಿರ್ವಚನದ ಆತಂಕಗಳು

ಮಹಿಳಾ ಚಳುವಳಿಯಲ್ಲಿ ಸಕ್ರಿಯವಾಗಿರುವ ಇಬ್ಬರು ಲೇಖಕಿಯರ ಕೃತಿಗಳು ಇತ್ತೀಚೆಗೆ ಇಳಾ ಪ್ರಕಾಶನ ಹಾಗೂ ಮಾನಸ ಪತ್ರಿಕಾ ಬಳಗದ ಆಶ್ರಯದಲ್ಲಿ ನಡೆದ ಒಂದು ವಿಶೇಷ ಕಾರ್ಯಕ್ರಮದಲ್ಲಿ ಬಿಡುಗಡೆಯಾದವು. ಕವಯಿತ್ರಿ ದು.ಸರಸ್ವತಿಯವರ 'ಹೆಣೆದರೆ ಜೇಡನಂತೆ' ಕವನ ಸಂಕಲನ ಮತ್ತು ಹೆಚ್.ಎಸ್. ಚಂಪಾವತಿಯವರ 'ಶಿವಗಂಗಾ' ಕಾದಂಬರಿಗಳು ಬಿಡುಗಡೆಯಾದ ಕೃತಿಗಳು.

ಡಾ|| ಎಚ್.ಎಸ್. ರಾಘವೇಂದ್ರರಾವ್‌ರವರ ಅಧ್ಯಕ್ಷತೆಯಲ್ಲಿ ನಡೆದ ಕಾರ್ಯಕ್ರಮದಲ್ಲಿ ಕವಿ ಗೋವಿಂದಯ್ಯನವರು ದು.ಸರಸ್ವತಿಯವರ 'ಹೆಣೆದರೆ ಜೇಡನಂತೆ' ಕವನ ಸಂಕಲನವನ್ನು ಮೊದಲು ಬಿಡುಗಡೆ ಮಾಡಿ ಇಂದಿನ ಕಾವ್ಯ ಪರಿಸರದಲ್ಲಿ ಈ ಕೃತಿ ಹೇಗೆ ವಿಶಿಷ್ಟ ಸ್ಥಾನ ಪಡೆಯುತ್ತದೆ, ಎಂಬುದನ್ನು ವಿಶ್ಲೇಷಿಸಿದರು. ಕನ್ನಡ ಕಾವ್ಯ ಪರಂಪರೆಯ ಇತಿಹಾಸವನ್ನು ವಿಶ್ಲೇಷಿಸುತ್ತಾ ಸಮುದಾಯಿಕ ಸೃಷ್ಟಿಯಾದ ಬಂಡಾಯಸಾಹಿತ್ಯವೂ ಮನುಷ್ಯನ ಭಾವನೆಗಳನ್ನು ಸರಳೀಕರಿಸಿ ಆಶಯಗಳನ್ನು ಕೊಂದು ಹಾಕಿತೆಂದು ಅಭಿಪ್ರಾಯ ಪಟ್ಟರು. ಬಂಡಾಯ ಸಾಹಿತ್ಯದ ಸಂದರ್ಭ ಮತ್ತು ನಂತರದ ದಿನಗಳಲ್ಲಿ ಕಾವ್ಯ ಮಂಕುಬಡಿದ ದುರ್‍ಅವಸ್ಥೆಯ, ಹತಾಶೆಯ ಸಂದರ್ಭದಲ್ಲಿ ಸರಸ್ವತಿಯವರ ಈ ಕವನ ಸಂಕಲನ ಆಶಾಕಿರಣವಾಗಿದೆ, ಎಂದು ವಿಶ್ಲೇಷಿಸಿದರು.

ಚಂಪಾವತಿಯವರ 'ಶಿವಗಂಗಾ' ಕಾದಂಬರಿಯ ಬಿಡುಗಡೆ ಮಾಡಿ ಮಾತನಾಡಿದ ಡಾ|| ವಿಜಯಾ ದಬ್ಬೆಯವರು, ಮೊದಲಿಗೆ ಗೋವಿಂದಯ್ಯನವರ ಮಾತಿಗೆ ತೀವ್ರವಾಗಿ ಪ್ರತಿಕ್ರಿಯಿಸುತ್ತಾ, ಎಂಭತ್ತರ ದಶಕದಲ್ಲಿ ಕನ್ನಡ ಕಾವ್ಯಕ್ಕೆ ಮಂಕು ಬಡಿದಿದೆಯೆನ್ನುವುದಾದರೆ, ಅದು ಗಂಡಸರ ಕಾವ್ಯಕ್ಕಿರಬಹುದೇ ಹೊರತು ಹೆಂಗಸರ ಕಾವ್ಯಕ್ಕಂತೂ ಅಲ್ಲ-ಎಂದು ಸ್ಪಷ್ಟಪಡಿಸಿದರು. ಆರಂಭದಲ್ಲಿ ಪ್ರಸ್ತಾವನೆಯ ಮಾತುಗಳನ್ನಾಡಿದ ವಿ. ಗಾಯತ್ರಿಯವರು ಎಂಭತ್ತರ ದಶಕವು ಮಹಿಳಾ ಚಳುವಳಿಯ ದೃಷ್ಟಿಯಿಂದ ಸ್ಥಗಿತತೆಯ ಕಾಲವನ್ನಾಗಿ ಪರಿಗಣಿಸಬಹುದು ಎಂದಿದ್ದರು. ಆದರೆ ಈ ಮಾತನ್ನು ಅಲ್ಲಗಳೆದ ವಿಜಯಾರವರು ಹೇಗೆ ಎಂಭತ್ತರ ದಶಕದಿಂದೀಚೆಗೆ ಮಹಿಳಾ ಚಳುವಳಿ ತನ್ನ ನಿರ್ವಚನವನ್ನು, ಸ್ವರೂಪವನ್ನು ಬದಲಾಯಿಸಿಕೊಳ್ಳುತ್ತಾ ಬಹುಮುಖತೆಯ ವ್ಯಾಪಕತೆಯನ್ನು ಪಡೆದು-ಕೊಳ್ಳುತ್ತಿದೆ ಎಂದು ವಿವರಿಸಿದರು.

ಸ್ತ್ರೀವಾದಿ ವಾಸ್ತವವಾದಿ ಕಾದಂಬರಿ ಸ್ತ್ರೀವಾದಿ ಸಂವೇದನೆಗೆ ಮತ್ತು ಸ್ತ್ರೀವಾದಿ ಚಳುವಳಿಗೆ ಮುಕ್ತವಾಗಿ ತೆರೆದುಕೊಳ್ಳಬೇಕಾಗುತ್ತದೆ ಎಂಬುದರ ಹಿನ್ನೆಲೆಯಲ್ಲಿ 'ಶಿವಗಂಗಾ' ಕಾದಂಬರಿಯನ್ನು ವಿಶ್ಲೇಷಿಸುತ್ತಾ, ಲೇಖಕಿ-ಯರು 'ಕುರುಡು ಗಾಂಧಿವಾದಿಗಳಂತೆ ಕುರುಡು ಸ್ತ್ರೀವಾದಿಗಳೂ ಆಗಬಾರದೆಂದರು.' ಈ ಕೃತಿ ಒಂದು ಚಾರಿತ್ರಿಕ, ಸಾಂಸ್ಕೃತಿಕ ದಾಖಲೆಯಾಗಿ ಮಹತ್ವದ್ದೆನಿಸಿದರೂ, ಈ ಚಿತ್ರಣವೂ ಅಪೂರ್ಣವಾಗಿದೆ; ಭಾಗಶಃ ಚಿತ್ರ ಕೊಡುತ್ತದೆ ಎಂದು ಕೃತಿಯ ಕೊರತೆಯನ್ನು ಎತ್ತಿ ತೋರಿಸಿದರು. ಈ ಕಾರಣಕ್ಕಾಗಿಯೇ ಚಂಪಾರವರ ಕೃತಿ ಸಂತೋಷವನ್ನು, ಆತಂಕವನ್ನೂ ಏಕಕಾಲಕ್ಕೆ ಉಂಟುಮಾಡುತ್ತದೆ ಎಂದೂ ಅಭಿಪ್ರಾಯ ಪಟ್ಟರು. ಈ ಕಾದಂಬರಿಯು ಧ್ವನಿಸುವಂತೆ ಹೆಣ್ಣಿನ ಸೃಜನ ಶೀಲ ನೆಲೆಗೆ ಗಂಡಸೇ ಸ್ಫೂರ್ತಿಯ ಸೆಲೆಯಾಗಬೇಕೇ ಎಂದು ಪ್ರಶ್ನಿಸಿದರು.

ಈ ಕಾರ್ಯಕ್ರಮದ ಅಧ್ಯಕ್ಷಸ್ಥಾನದಿಂದ ಮಾತನಾಡಿದ ಡಾ|| ಎಚ್.ಎಸ್.ರಾಘವೇಂದ್ರರಾವ್‌ರವರು ಸ್ತ್ರೀವಾದಿ ಚಳುವಳಿಯ ಭಾಗವಾಗಿ ಮೂಡಿಬಂದಿರುವ ಈ ಕಾದಂಬರಿಯಲ್ಲಿರುವ ಹಲವಾರು ಚಿಂತನೆಯ ನೆಲೆಗಳನ್ನು ಸೂಚಿಸಿದರು. 'ಹೆಣ್ಣಿನೊಳಗಿನ ಗಂಡುತನ ಮತ್ತು ಗಂಡಿನೊಳಗಿನ ಹೆಣ್ಣುತನ' ಮುನ್ನೆಲೆಗೆ ಬರಬೇಕೆಂಬ ದರ್ಶನವನ್ನು ಈ ಕೃತಿಯಲ್ಲಿ ಗುರುತಿಸಿದರು. ಹಲವಾರು ವಿಚಾರಗಳನ್ನು ತನ್ನೊಡಲಿನಲ್ಲಿ ಇಟ್ಟುಕೊಂಡ ಈ ಕೃತಿಯಲ್ಲಿ ವಿಚಾರ ಮತ್ತು ಕ್ರಿಯೆಗಳು ಪರಸ್ಪರ ಸಂಬಂಧ ಹೊಂದಿವೆ. ಯಾವುದೇ ಪೋಸ್ ಇಲ್ಲದೆ ಪ್ರಾಮಾಣಿಕತೆಯಿಂದ ಮುಗ್ಧವಾಗಿ ಈ ಕೃತಿ ರಚಿಸಲ್ಪಟ್ಟದೆ ಎಂದು ಹೆಚ್.ಎಸ್.ಆರ್. ಅಭಿಪ್ರಾಯಪಟ್ಟರು. ಲೈಂಗಿಕ ವಿವರಗಳಿಂದ ಆರಂಭಿಸಿ ಲೈಂಕಿಕ ರಾಜಕೀಯವನ್ನು ಕುರಿತು ಚರ್ಚಿಸಲು ಈ ಕಾದಂಬರಿಯಲ್ಲಿ ಅಲೆಮಾರಿತನ ಮತ್ತು ಅಂಟಿಕೊಳ್ಳುವಿಕೆಯ ದರ್ಶನದ ನೆಲೆಗಳು ಬಹುಮುಖ್ಯವಾಗಿ ಚರ್ಚಿಸಲ್ಪಟ್ಟವೆ ಎಂಬುದು ಹೆಚ್.ಎಸ್.ಆರ್. ರವರ ಅಭಿಪ್ರಾಯವಾಗಿತ್ತು.

ಬೆಳಗಿನ ಪುಸ್ತಕ ಬಿಡುಗಡೆಯ ಈ ಗೋಷ್ಠಿಯಲ್ಲಿ ಕೃತಿಯ ಸಾಹಿತ್ಯಕ ಆಯಾಮದ ಚರ್ಚೆಯತ್ತ ಭಾಷಣಕಾರರು ತಮ್ಮ ಮೌನವನ್ನು ವ್ಯಕ್ತಪಡಿಸಿ ಕೃತಿಯ ಸಾಮಾಜಿಕ ಮತ್ತು ತಾತ್ವಿಕ ನೆಲೆಗಳನ್ನು ಮಾತ್ರ ಚರ್ಚಿಸಿದರು.

ಊಟದ ನಂತರ ಮಧ್ಯಾಹ್ನದ ಗೋಷ್ಠಿಯನ್ನು ಈ ಕೃತಿಯ ಮುಕ್ತ ಚರ್ಚೆಗೆಂದೇ ಏರ್ಪಡಿಸಲಾಗಿತ್ತು. ಸುಮಾರು ಮೂವತ್ತಕ್ಕೂ ಹೆಚ್ಚು ಜನರಿಗೆ ಮುಂಚಿತವಾಗಿಯೇ ಪುಸ್ತಕ ಓದಿಸಿ ಈ ಚರ್ಚೆಗೆ ಆಹ್ವಾನಿಸಿದ್ದು ಈ ಕಾರ್ಯಕ್ರಮದ ವಿಶೇಷವಾಗಿತ್ತು. ಡಾ|| ಬಿ.ಎನ್.ಸುಮಿತ್ರಾಬಾಯಿಯವರ ನಿರ್ವಹಣೆಯಲ್ಲಿ ನಡೆದ ಈ ಚರ್ಚಾಗೋಷ್ಠಿ ಬೆಳಗಿನ ಕಾರ್ಯಕ್ರಮದ ಸ್ವರೂಪಕ್ಕಿಂತ ಭಿನ್ನವಾಗಿತ್ತು. ಕೃತಿಯ ಸಂರಚನೆ, ಭಾಷೆ, ಆಶಯಗಳನ್ನು ಮುಕ್ತವಾಗಿ ಚರ್ಚಿಸಿದ ಸಾಹಿತ್ಯಾಸಕ್ತರು ಕೃತಿಯ ಕುಂದುಕೊರತೆಗಳನ್ನು, ಹಾಗೂ ಅದರ ಮಿತಿಯನ್ನು ಸೋದಾಹರಣವಾಗಿ ವಿವರಿಸಿದರು. ಮಹಿಳಾ ಹೋರಾಟದ ವಸ್ತು ಮತ್ತು ಅನುಭವವನ್ನು ಸಾಹಿತ್ಯದ ಚರ್ಚೆಯೊಳಗೆ ತಂದು ಚಾರಿತ್ರಿಕವಾಗಿ ಗಮನ ಸೆಳೆಯುವ ಈ ಕೃತಿ ಹೇಗೆ ಉತ್ತಮ ವಸ್ತುನಿಷ್ಠ ಚಾರಿತ್ರಿಕ ದಾಖಲೆಯಾಗುವುದಿಲ್ಲ ಎಂಬುದನ್ನು ಗಮನಿಸು-ವುದರೊಂದಿಗೆ ಈ ಕೃತಿಯು ಕೊಡುವ ಮಾದರಿಗಳ ಸಾಚಾತನವನ್ನು ಮತ್ತು ವಾಸ್ತವತೆಯನ್ನು ಪ್ರಶ್ನಿಸುವ ಚರ್ಚೆಯೂ ನಡೆಯಿತು. 'ಮಹಿಳಾ ಹೋರಾಟ'ವನ್ನು ವಸ್ತುವಾಗಿಸಿದ ಈ ಕಾದಂಬರಿಯ ಚರ್ಚೆಯು ಮಹಿಳಾ ಹೋರಾಟದ ವಿವಿಧ ಆಶಯಗಳನ್ನು ಮತ್ತು ವಿವಿಧ ನೆಲೆಗಳ ವೈರುಧ್ಯವನ್ನು ಕುರಿತ ಗಂಭೀರ ಚರ್ಚೆಯನ್ನು ಹುಟ್ಟು ಹಾಕದಿದ್ದುದು ಒಟ್ಟಾರೆಯಾಗಿ ನಿರಾಸೆಯನ್ನು ಹುಟ್ಟಿಸಿತು. *

# ಕ್ವಿನಕ್ರೆನ್ - ಅವೈಜ್ಞಾನಿಕ ಸಂತಾನ ನಿರೋಧ ವಿಧಾನ

ಭಾರತದಲ್ಲಿ ಸ್ವಾತಂತ್ರ್ಯ ಬಂದು 50 ವರ್ಷಗಳ ನಂತರವೂ ಬಡತನ, ಅನಕ್ಷರತೆ, ನಿರುದ್ಯೋಗ ಮೂಲಭೂತ ಸಮಸ್ಯೆಗಳಾಗಿಯೇ ಉಳಿದಿವೆ. ಜನಾರೋಗ್ಯ ಸಾಧನೆಯಲ್ಲೂ ನಾವು ಹಿಂದೆ ಬಿದ್ದಿದ್ದೇವೆಯೆಂದೇ ಹೇಳಬಹುದಾಗಿದೆ. ಮಹಿಳೆಯ ಆರೋಗ್ಯ ಪುರುಷನಿಗೆ ಹೋಲಿಸಿದಲ್ಲಿ ಚಿಂತಾಜನಕವಾಗಿದೆ. ಸಮಾಜದಲ್ಲಿ ಮಹಿಳೆಯ ಸ್ಥಾನಮಾನ, ಆರ್ಥಿಕ ಪರಿಸ್ಥಿತಿ, ಮಹಿಳೆಯ ಅನಾರೋಗ್ಯದ ಮುಖ್ಯ ಕಾರಣಗಳು. ಚೀನಾ ದೇಶದಲ್ಲಿ ಜನ ಸಂಪತ್ತನ್ನು ಎಲ್ಲಾ ಸಂಪತ್ತಿಗಿಂತ ಮಿಗಿಲಾಗಿ ಕಂಡರೆ, ಭಾರತದಲ್ಲಿ ಜನ ಸಂಪತ್ತನ್ನು ಜನಸಂಖ್ಯಾ ಸಮಸ್ಯೆಯೆಂದೇ ಕಾಣಲಾಗುತ್ತದೆ. ಮಹಿಳಾ ಆರೋಗ್ಯ ಸುಧಾರಿಸಲು ಭಾರತ ಸರಕಾರದ ಪ್ರಯತ್ನಗಳಲ್ಲಿ ಕುಟುಂಬ ನಿಯಂತ್ರಣ ಪ್ರಾಮುಖ್ಯತೆ ಪಡೆದಿದೆ. ಕುಟುಂಬ ಯೋಜನೆಯೆಂದು ಕರೆಯಲಾಗುತ್ತಿದ್ದ ಈ ಕಾರ್ಯಕ್ರಮವನ್ನು ಕುಟುಂಬ ಕಲ್ಯಾಣ ಎಂದು ಹೊಸನಾಮಾಂಕನ ಮಾಡಿದರೂ, ಅದರ ಪ್ರಯತ್ನ ಕುಟುಂಬವನ್ನು ಮಿತಗೊಳಿಸುವುದಷ್ಟೆ ಆಗಿದೆ.

ಇಂದು ಜನಸಂಖ್ಯಾ ಸಮಸ್ಯೆ ನಮ್ಮ ಎಲ್ಲಾ ತೊಂದರೆಗಳಿಗೆ ಮುಖ್ಯ ಕಾರಣ ಎಂಬ ಕೂಗು ಎಲ್ಲೆಡೆಯೂ ಕೇಳಿಬರುತ್ತಿದೆ. ನಾವು ಆರ್ಥಿಕ, ಸಾಮಾಜಿಕ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳದೇ ಕೇವಲ ಜನಸಂಖ್ಯಾ ಸಮಸ್ಯೆಯನ್ನು ಬಗೆಹರಿಸಿಕೊಳ್ಳಲು ಪ್ರಯತ್ನಿಸುತ್ತಾ, ಹೊಸ ಸಮಸ್ಯೆಗಳಿಗೆ ಸಿಕ್ಕಿ ಹಾಕಿಕೊಳ್ಳುತ್ತಿದ್ದೇವೆ. ಜನ ಸಂಖ್ಯಾ ಸಮಸ್ಯೆಯನ್ನು ನಿವಾರಿಸಲು ನಾವು ಮಹಿಳೆಗೆ ಉದ್ದಿಷ್ಟ ಗುಂಪಿನ ಪ್ರಾಮುಖ್ಯತೆಯನ್ನು ಕೊಟ್ಟಿದ್ದೇವೆ. ವಿಶೇಷವಾಗಿ 80ರ ಹಾಗೂ 90ರ ದಶಕಗಳಲ್ಲಿ ಮಹಿಳೆಯ ಮೇಲೆ ಸಂತಾನ ನಿರೋಧ ವಿಧಾನಗಳನ್ನು ಪ್ರಯೋಗ ಮಾಡಲಾಗಿದೆ. ಅದರಲ್ಲೂ ಮೂರನೇ ಜಗತ್ತಿನ ಮಹಿಳೆಯರು ಈ ಪ್ರಯೋಗಗಳಿಗೆ ಬಲಿ ಪಶುಗಳಾಗಿದ್ದಾರೆ. ಇಲ್ಲಿಯವರೆಗೆ ನಾರ್‌ಪ್ಲಾಂಟ್, ಸಟಿನ್, ಡಿಸೋಪ್ರೋವೇರಾದಂತಹ ಸಂತಾನ ನಿರೋಧ ಸಲಕರಣೆಗಳನ್ನು ಉಪಯೋಗಿಸುತ್ತಿದ್ದು, ಇಂದು ಹೊಸ ವಿಧಾನದ ಬಳಕೆ ಭಾರತದಲ್ಲಿ ಹಲವೆಡೆ ಕಂಡು ಬಂದಿದೆ. ಈ ವಿಧಾನವನ್ನು ಕ್ವಿನಕ್ರೆನ್ ವಿಧಾನ ಎಂದು ಕರೆಯಲಾಗಿದೆ. ಅದರ ಈ ಎಲ್ಲಾ ಸಂತಾನ ನಿರೋಧ ಕ್ರಮಗಳನ್ನು ಭಾರತೀಯ ಮಹಿಳೆಯ ಮೇಲೆ ಉಪಯೋಗಿಸಲಾಗುತ್ತಿರುವುದು, ಹಾಗೂ ಸರಕಾರ ಇದರ ವಿರುದ್ಧ ಕ್ರಮ ತೆಗೆದುಕೊಳ್ಳದೇ ಇರುವುದು ವಿಷಾದಕರ. ನಾಖೀ ಕ್ಯಾಂಪ್‌ಗಳಲ್ಲಿ ಈ ವಿಧಾನದ ಬಳಕೆ ಇತ್ತೆಂದು ತಿಳಿದುಬಂದಿದೆ. ಕುತೂಹಲಕರ ವಿಷಯವೆಂದರೆ ಮೊದಲನೇ ಜಗತ್ತಿನಲ್ಲಿ ಈ ವಿಧಾನಬಳಕೆ ಇಲ್ಲ.

ಈ ವಿಧಾನವನ್ನು ಚಿಲೀದೇಶದ ಜೆ.ಝಿಪರ್ ಎಂಬ ವಿಜ್ಞಾನಿ 70ರ ದಶಕದಲ್ಲಿ ಕಂಡು ಹಿಡಿದಿದ್ದಾನೆ. ಆದರೆ ಈ ವಿಜ್ಞಾನಿ ಈ ವಿಧಾನವನ್ನು ವೈಜ್ಞಾನಿಕವಾಗಿ ರುಜುವಾತು ಪಡಿಸಲು ಅಸಮರ್ಥನಾಗಿದ್ದಾನೆ. ಆದರೂ ಈ ವಿಧಾನವನ್ನು ಇಂದಿಗೂ ಪ್ರಚಾರ ಮಾಡುತ್ತಾ ಬಂದಿದ್ದಾನೆ. ವೈದ್ಯರನ್ನು ಪ್ರೋತ್ಸಾಹಿಸಿ, ಈ ವಿಧಾನವನ್ನು ಅಕ್ರಮವಾಗಿ ಬಳಸಲು ಕೆಲವು ಸಂಸ್ಥೆಗಳು ಪ್ರಯತ್ನ ಪಡುತ್ತಿವೆ. ಈ ಸಂಸ್ಥೆಗಳ ವ್ಯಕ್ತಿಗಳ ಮುಖ್ಯ ಉದ್ದೇಶ ಜನಸಂಖ್ಯಾ ನಿಯಂತ್ರಣ. ''ಜನಸಂಖ್ಯಾ ಆಸ್ಫೋಟವನ್ನು ತಡೆಯಬೇಕಾಗಿದೆ. ಇದೊಂದು ಒಳ್ಳೆಯ ವಿಧಾನ''ವೆಂಬ ಕರೆಯನ್ನು ಇವರು ಪ್ರಚಾರ ಮಾಡುತ್ತಿದ್ದಾರೆ. ''ಜನಸಂಖ್ಯಾ ಆಸ್ಫೋಟ ತಡೆಯದಿದ್ದರೆ, ಹೆಚ್ಚು ಹೆಚ್ಚು ಜನರು ಅಮೇರಿಕಾಗೆ ವಲಸೆ ಹೋಗುತ್ತಿದ್ದುದ್ದರಿಂದ ಅಮೆರಿಕಾ ಒಂದು ತೃತೀಯ ಜಗತ್ತಿನ ರಾಷ್ಟ್ರದಂತಾಗುತ್ತದೆ.'' ಎಂದು ಎಲ್ಲಿನ್‌ಕ್ಯಾಸೆಲ್ ಎಂಬುವರು ಎಚ್ಚರಿಕೆ ನೀಡುತ್ತಿದ್ದಾರೆ. ಅವರೇ ಈ ವಿಧಾನವನ್ನು ಜಗತ್ತಿನ ಎಲ್ಲೆಡೆ ಪ್ರಚಾರ ಮಾಡುತ್ತಿದ್ದಾರೆ. ಮೇರಿ ಸ್ಟೋಪ್ ಎಂಬ ಅಂತರಾಷ್ಟ್ರೀಯ ಸಂಸ್ಥೆಯ ವೈದ್ಯ ಟೈಮ್ ಬ್ಲಾಕ್ (Time Black) ಹೇಳುವುದೇನೆಂದರೆ ''2006ರ ಹೊತ್ತಿಗೆ 200 ದಶಲಕ್ಷ ಹೊಸ ದಂಪತಿಗಳಿಗೆ ಗರ್ಭನಿರೋಧದ ಅಗತ್ಯತೆ ಬೀಳುತ್ತದೆ. ಆದ್ದರಿಂದ ಈ ವಿಜ್ಞಾನದ ಉಪಯೋಗ ಅತ್ಯಗತ್ಯ'' ಎಂದು ಜನರಲ್ಲಿ ಹೊಸ ಭೀತಿಯನ್ನೇ ಹುಟ್ಟಿಸಿದ್ದಾನೆ. ಜನಸಂಖ್ಯಾ ಸಮಸ್ಯೆ ಒಂದು ಮುಖ್ಯ ಸಮಸ್ಯೆ. ಆದರೆ ಅದನ್ನು ಸಮಗ್ರವಾಗಿ ಅರ್ಥೈಸದೇ ಪರಿಹಾರ ಕಂಡು ಹಿಡಿಯದೇ, ಕೇವಲ ಕ್ವಿನಕ್ರೆನ್ ವಿಧಾನದ ಬಳಕೆಯಿಂದ ಅದನ್ನು ಸರಿಪಡಿಸಬಹುದೆಂಬ ವಾದವನ್ನು ಒಪ್ಪಿಕೊಳ್ಳುವುದು ''ಎತ್ತಿಗೆ ಜ್ವರ ಬಂದರೆ ಎಮ್ಮೆಗೆ ಚುಚ್ಚುಮದ್ದು ಕೊಟ್ಟಂತಾ''ಗುತ್ತದೆ. ಈ ವಿಧಾನದ ಬಳಕೆ ಭಾರತದಲ್ಲಿಯೂ ವರದಿಯಾಗಿದೆ. ಕಲಕತ್ತಾದಲ್ಲಿ ಬಿರಾಲ್ ಮಲ್ಲಿಕ್ (Biral Mallik) ಎಂಬುವರು 1979 ರಿಂದ ಉಪಯೋಗಿಸುತ್ತಿದ್ದು, ದೆಹಲಿಯಲ್ಲಿ ಜೈನ್ ಆಸ್ಪತ್ರೆ (ಬಿಜೆಪಿ ಎಂ.ಪಿ. ಡಾ॥ ಜೈನ್) ಹಾಗೂ ಬೆಂಗಳೂರಿನಲ್ಲಿ ಚಿಪ್ ಸಂಸ್ಥೆ (ಕಿನಿ, ರಾಜಗೋಪಾಲ್, ಭತೀಜಾ) ಯವರು ವಿಧಾನವನ್ನು ಬಳಸುತ್ತಿದ್ದಾರೆಂದು ವರದಿಯಾಗಿದೆ.

ಚಿಪ್ ಸಂಸ್ಥೆಯವರು ಬೆಂಗಳೂರಿನಲ್ಲಿ ಹಾಗೂ ಮಂಗಳೂರಿನಲ್ಲಿ ಅನೇಕ ವೈದ್ಯರಿಗೆ ಈ ವಿಧಾನವನ್ನು ಬಳಸಲು ಪ್ರೋತ್ಸಾಹಿಸುತ್ತಿದ್ದಾರೆ. ಆ ವೈದ್ಯರಿಗೆ ಕೇವಲ ಸುಲಭ ವಿಧಾನದ ಮಾಹಿತಿ ನೀಡಲಾಗಿದೆ, ಹೊರತು ಈ ವಿಧಾನ ಅಕ್ರಮವೆಂದು ಗೊತ್ತುಪಡಿಸಲಾಗಿಲ್ಲ. ಆ ವೈದ್ಯರು ಈ ವಿಧಾನ ಅಂತಾರಾಷ್ಟ್ರೀಯವಾಗಿ ಸಮ್ಮತಿ ಪಡೆದಿದೆಯೆಂಬ ನಂಬುಗೆಯ ಮೇಲೆ ಉಪಯೋಗಿಸುತ್ತಿದ್ದಾರೆ. ಈ

ವಿಧಾನವನ್ನು ಜಗತ್ತಿನ 16 ರಾಷ್ಟ್ರಗಳಲ್ಲಿ (ತೃತೀಯ ಜಗತ್ತಿನ) ಉಪಯೋಗಿಸಲಾಗುತ್ತಿದ್ದು, ಆಧಾರ ರಹಿತ ಪ್ರಯೋಗಕ್ಕೆ ಮನ್ನಣೆ ಕೊಟ್ಟಂತಾಗಿದೆ. ಅನೇಕ ಸುಳ್ಳುಗಳನ್ನು ಹೇಳುತ್ತಾ ಬಂದು, ಸುಳ್ಳೇ ಸತ್ಯವೆಂದು ಸಿದ್ಧಪಡಿಸುವಂತಾಗುತ್ತದೆಂಬ ತರ್ಕವನ್ನು ಇದರ ಉಪಯೋಗದಿಂದ ಕಾಣಬಹುದು.

ವಿಧಾನ :- ಮಹಿಳೆಯ ರುತುಸ್ರಾವ ಕಳೆದ ನಂತರ 6 ರಿಂದ 12ನೇ ದಿನದವರೆಗೆ ಕ್ವಿನ್‌ಕ್ರಿನ್ ಮಾತ್ರೆಗಳನ್ನು ವಿಶೇಷವಾದ ಉಪಕರಣದಿಂದ ಗರ್ಭದಲ್ಲಿ ಅಳವಡಿಸಲಾಗುತ್ತಿದೆ. ಅರ್ಧ ಗಂಟೆಯಲ್ಲಿ ಈ ಗುಳಿಗೆ ಕರಗಿ ಕ್ವಿನಕ್ರೆನ್ ಗರ್ಭಾಶಯದಲ್ಲಿ ಹರಡುತ್ತದೆ. ಉರಿಯೂತ ಉಂಟಾಗುತ್ತದೆ. ಕ್ರಮೇಣ ಈ ಉರಿಯೂತ ಕಡಿಮೆಯಾಗಿ 8 ರಿಂದ 12ನೇ ವಾರದಲ್ಲಿ ಗರ್ಭನಾಳಗಳು ಗಾಯದ ಕಲೆಯಿಂದ ಮುಚ್ಚಲ್ಪಡುತ್ತದೆ. (ಕೆಲವು ಬಾರಿ ಸಂಪೂರ್ಣವಾಗಿ ಮುಚ್ಚದೇ ಇರಬಹುದು). ಅಲ್ಲಿಯವರೆಗೆ ಬೇರೊಂದು ಸಂತಾನನಿರೋಧ ವಿಧಾನವನ್ನು ಬಳಕೆ ಮಾಡುತ್ತಾರೆ. ಚಿಪ್ ಸಂಸ್ಥೆಯವರು ಡಿಪೋಪ್ರೋವೇರಾ ಬಳಸುತ್ತಾರೆಂದು ವರದಿಯಾಗಿದೆ. ಇದೊಂದು ಚುಚ್ಚು ಮದ್ದು ರೂಪದಲ್ಲಿ ಕೊಡುವ ಅಪಾಯಕಾರಿ ಔಷಧಿ.

ಈ ವಿಧಾನದ ಬಳಕೆಯಲ್ಲಿ ಯಾವ ನಿರ್ದಿಷ್ಟ ಪ್ರಮಾಣವನ್ನೂ ಅನುಸರಿಸಲಾಗುತ್ತಿಲ್ಲ. ಈ ವಿಧಾನವನ್ನು ಆಸ್ಪತ್ರೆಯ ಹೊರ ರೋಗಿ ವಿಭಾಗದಲ್ಲೇ ಅಳವಡಿಸಬಹುದು, ಕೆಲವೇ ನಿಮಿಷಗಳು ಬೇಕಾಗುತ್ತದೆ. ಕೂಡಲೇ ಮಹಿಳೆ ಮನೆಗೆ ಹೋಗಬಹುದು. ಈ ವಿಧಾನವನ್ನು ಒಮ್ಮೆ ಉಪಯೋಗಿಸಿದರೆ, ಪುನಃ ಗರ್ಭಧಾರಣೆ ಸಾಧ್ಯವಿಲ್ಲ!

ಈ ವಿಧಾನದ ಬಳಕೆಯಿಂದ ಕೂಡಲೇ ಉಂಟಾಗುವ ಕೆಲವು ಅಡ್ಡ ಪರಿಣಾಮಗಳೆಂದರೆ, ಹೊಟ್ಟೆ ನೋವು, ತಲೆ ಸುತ್ತುವುದು, ರಕ್ತಸ್ರಾವ, ಇತ್ಯಾದಿ. ಕೆಲವು ಸಮಯದ ನಂತರ ಉಂಟಾಗುವ ಅಡ್ಡ ಪರಿಣಾಮಗಳೆಂದರೆ ಮುಟ್ಟು ವ್ಯತ್ಯಾಸ ಕೆಳ ಹೊಟ್ಟೆಯ ಸೋಂಕು, (Pelvic infection) ಮಾನಸಿಕ ಅಸ್ವಸ್ಥತೆ, ಅಪಸ್ಮಾರ ಗರ್ಭನಾಳದಲ್ಲಿ ಉಂಟಾಗುವ ಗರ್ಭದಾರಣೆ. (Ecotopic Pregnancy) ಇತ್ಯಾದಿ.

ಜೆ. ಝಿಪರ್ ಮಾಡಿದ ಒಂದೇ ಪ್ರಯೋಗದ ಆಧಾರದ ಮೇಲೆ ತೃತೀಯ ಜಗತ್ತಿನ ಅನೇಕ ರಾಷ್ಟ್ರಗಳಲ್ಲಿ ಈ ವಿಧಾನವನ್ನು ಬಳಸಲಾಗಿದೆ. ಆದರೆ ಈ ಬಳಕೆಯನ್ನು ಚಿಕಿತ್ಸೆ ಎಂದೇ ಹೇಳುತ್ತಾ ಬಂದಿದ್ದಾರೆ. ಆದರೆ ಈ ವಿಧಾನದ ಉಪಯೋಗಕ್ಕೆ ಯಾವ ವೈಜ್ಞಾನಿಕ ಸಂಸ್ಥೆ, ಔಷಧಿ ನಿಯಂತ್ರಣ ಅಧಿಕಾರಿ ಹಾಗೂ ಸರಕಾರದ ಸಮ್ಮತಿ ಇಲ್ಲ.

ಯಾವುದೇ ಔಷಧಿ ಪ್ರಯೋಜಕ ಎಂದು ಸಿದ್ಧಪಡಿಸಲು ಹಲವಾರು ಕಡೆಗಳಲ್ಲಿ ಪ್ರಾಣಿಗಳ ಮೇಲೆ, ನಂತರ ಮಾನವನ ಮೇಲೆ ಪ್ರಯೋಗ ಮಾಡಿದ, ಆ ಪ್ರಯೋಗ ಯಶಸ್ವಿಯಾದ ನಂತರವೇ ಆ ಔಷಧಿಯನ್ನು ಬಳಸಬೇಕಾಗುತ್ತದೆ. ಪ್ರಯೋಗದ ಸಮಯದಲ್ಲಿ ಪ್ರಯೋಗಿಸುವ ವ್ಯಕ್ತಿಗೆ, ಆ ಪ್ರಯೋಗದ ಆಗುಹೋಗುಗಳ ಮಾಹಿತಿ ನೀಡಿ, ಆ ವ್ಯಕ್ತಿಯ ಅನುಮತಿ ಪಡೆಯಬೇಕಾಗುತ್ತದೆ. ಪ್ರಯೋಗದ ನಂತರ ಚಿಕಿತ್ಸಾ ರೂಪದಲ್ಲಿ ಆ ಔಷಧಿಯನ್ನು ನೀಡಿದರೂ, ಚಿಕಿತ್ಸಾ ಸಮಯದಲ್ಲಿ ಯಾವುದಾದರೂ ಅಡ್ಡ ಪರಿಣಾಮ ಉಂಟಾಗುತ್ತದೆಯೇ ಎಂದು ಸತತವಾಗಿ ಜಾಗರೂಕತೆ ವಹಿಸಿ, ಆ ಸಮಯದಲ್ಲಿ ಉಂಟಾಗುವ ಅಡ್ಡ ಪರಿಣಾಮಗಳನ್ನು ದಾಖಲಿಸಬೇಕಾಗುತ್ತದೆ. ಈ ನಿಯಮವು ಯಾವುದೇ ಹೊಸ ಔಷಧಿಗೂ ಅನ್ವಯಿಸುತ್ತದೆ. ಆದರೆ ಕ್ವಿನಕ್ರೆನ್ ವಿಧಾನದ ಬಳಕೆಯಲ್ಲಿ ಈ ಯಾವ ನಿಯಮವನ್ನೂ ಗಮನಕ್ಕೆ ತೆಗೆದುಕೊಂಡಿಲ್ಲ. ಆದ್ದರಿಂದ ಈ ವಿಧಾನದ ಉಪಯೋಗ ರಾಷ್ಟ್ರೀಯ ಹಾಗೂ ಅಂತಾರಾಷ್ಟ್ರೀಯ ನಿಯಮಗಳನ್ನು ಉಲ್ಲಂಘಿಸಿ ಅಕ್ರಮವಾಗಿ ಬಳಕೆಯಲ್ಲಿದೆ.

ವಿಶ್ವ ಆರೋಗ್ಯ ಸಂಸ್ಥೆ ಈ ವಿಧಾನದ ಬಳಕೆಯನ್ನು ನಿಷೇಧಿಸಿದೆ. ಈ ಔಷಧಿಯು ವಿಷ ಉಂಟು ಮಾಡುವ ಪರಿಣಾಮದ ವರದಿಯಾಗುವ (Toxological report) ತನಕ ಈ ವಿಧಾನವನ್ನು ಚಿಕಿತ್ಸೆ ರೂಪದಲ್ಲಿ ಉಪಯೋಗಿಸುವಂತಿಲ್ಲ. ಕೆಲವು ಕಡೆ ಪ್ರಯೋಗ ಮಾಡಿದಲ್ಲಿ ಕ್ಯಾನ್ಸರ್ ಜೀವಕೋಶ ವಿಕಾರದ ಸಾಧ್ಯತೆಗಳು ಕಂಡು ಬಂದಿದ್ದರಿಂದ ಇದರ ವಿಷ ಉಂಟು ಮಾಡುವ ಪರಿಣಾಮದ ವರದಿ ಅಗತ್ಯವಾಗಿದೆ. ಭಾರತೀಯ ವೈದ್ಯಕೀಯ ಸಂಶೋಧನಾ ಮಂಡಳಿ (ಐ.ಸಿ.ಎಂ.ಆರ್.) ಈ ವಿಧಾನದ ಬಳಕೆಗೆ ತಡೆ ಹಾಕಿದೆ.

ಈ ವಿಧಾನ ವಿಫಲವಾಗುವ ಸಾಧ್ಯತೆ ಇದ್ದು, ಇಷ್ಟು ವಿಫಲತೆ ಇನ್ನಾವ ಶಾಶ್ವತ ವಿಧಾನದಲ್ಲೂ ಕಂಡು ಬರದೇ ಇದ್ದುದ್ದರಿಂದ ಇದು ಅಷ್ಟು ಪ್ರಯೋಜಕವಲ್ಲ.

ಈ ವಿಧಾನ ಸುಲಭ ವಿಧಾನವಾದ್ದರಿಂದ ದುರುಪಯೋಗ ಹೊಂದುವ ಸಾಧ್ಯತೆ ಇದೆ. ಬೆಂಗಳೂರಿನಲ್ಲಿ ಒಬ್ಬ ಮಹಿಳೆಗೆ (ಕಾಪರ್ ಟೀ) ವಂಕಿ ಯನ್ನು ಅಳವಡಿಸುವ ಬದಲು ಮಹಿಳೆಗೆ ತಿಳಿಸದೇ ಈ ವಿಧಾನವನ್ನು ಉಪಯೋಗಿಸಿ, ಗರ್ಭನಾಳದಲ್ಲಿ ಗರ್ಭದಾರಣೆಯಾಗಿ ಶಸ್ತ್ರ ಚಿಕಿತ್ಸೆ ಮಾಡಿದ ದಾಖಲೆ ಇದೆ.

ಇದನ್ನು ವೈದ್ಯರಲ್ಲದೆ ಇತರರು ಮಾಡಲು ಕೆಲವರು ಪ್ರೋತ್ಸಾಹಿಸುತ್ತಿದ್ದಾರೆ. (ಬಿರಾಲ್ ಮಲ್ಲಿಕ್) ವೈದ್ಯರಿಂದಲೇ ಅಪಾಯವಾಗುವ ಸಾಧ್ಯತೆ ಇದ್ದುದರಿಂದ ಅನುಭವ ಇಲ್ಲದವರಿಂದ ಉಂಟಾಗುವ ಅಪಾಯವನ್ನು ಊಹಿಸಬಹುದಾಗಿದೆ.

ಈ ವಿಧಾನದ ಬಗ್ಗೆ ಮಹಿಳೆಗೆ ಸರಿಯಾದ ಮಾಹಿತಿ ಕೊಡಲಾಗುತ್ತಿಲ್ಲ. ''ಮಾಹಿತಿ ಕೊಡುವ ಅಗತ್ಯವಿಲ್ಲ, ಏಕೆಂದರೆ ಮಹಿಳೆ ಅರ್ಥ




ಮಾಡಿಕೊಳ್ಳುವುದಿಲ್ಲ'' ಎಂದು ಬೆಂಗಳೂರಿನಲ್ಲಿ ಇದನ್ನು ಉಪಯೋಗಿಸುವ ಹಿರಿಯ ವೈದ್ಯೆ ಹೇಳುತ್ತಾಳೆ ಈ ವಿಧಾನವನ್ನು ಉಪಯೋಗಿಸಿದ್ದಕ್ಕೆ ಸರಿಯಾದ ದಾಖಲೆಗಳನ್ನು ಇಡಲಾಗುತ್ತಿಲ್ಲ.

ಈ ವಿಧಾನ ಅಕ್ರಮ, ಅವೈಜ್ಞಾನಿಕವಾಗಿದ್ದಾಗಲೂ, ಈ ವಿಧಾನವನ್ನು ಸಮರ್ಥಿಸಿಕೊಳ್ಳುವ ಪ್ರಯತ್ನಗಳು ನಡೆದಿವೆ. ಬೆಂಗಳೂರಿನ ಚಿಪ್ ಸಂಸ್ಥೆ ಪ್ರಕಟಿಸಿರುವ ಒಂದು ಲಘು ಪುಸ್ತಕದಲ್ಲಿ ಇಂತಹ ಅನೇಕ ವಿವಾದಾಸ್ಪದ ಅಂಶಗಳನ್ನು ದಾಖಲಿಸಿದ್ದಾರೆ.

★ ಈ ವಿಧಾನವನ್ನು 20 ದೇಶಗಳಲ್ಲಿ ಪರೀಕ್ಷಿಸಲಾಗಿದೆ. ಈ ವಿಧಾನವನ್ನು 20 ದೇಶಗಳಲ್ಲಿ ಉಪಯೋಗಿಸಲಾಗಿದೆ. ಪರೀಕ್ಷಿಸಲಾಗಿದೆ ಎಂಬುದಕ್ಕೆ ದಾಖಲೆಗಳಿಲ್ಲ.

★ ಇದೊಂದು ಚಿಕಿತ್ಸಾ ಕ್ರಾಂತಿ.

ಇದೊಂದು ಕೇವಲ ಹೊಸ ವಿಧಾನ. ಈ ವಿಧಾನ ಪ್ರಯೋಜಕ ಕಂಡಲ್ಲಿ ಮಾತ್ರ ಕ್ರಾಂತಿ ಎಂದು ಒಪ್ಪಿಕೊಳ್ಳಬಹುದು. ಇಂದು ಈ ವಿಧಾನ ನಿಷೇಧಕ್ಕೆ ಯೋಗ್ಯ ಎಂದು ಕಂಡು ಬರುತ್ತಿದೆ.

★ ಸರಕಾರ ಈಗಾಗಲೇ ಈ ವಿಧಾನದ ಬಳಕೆಯನ್ನು ಪರೀಕ್ಷಿಸುತ್ತಿದೆ.

ಸರಕಾರ ಈ ವಿಧಾನದ ಬಳಕೆಯನ್ನು ಪರೀಕ್ಷೆ ಮಾಡುತ್ತಿಲ್ಲ.

★ ಯಾವ ರೀತಿಯ ಕ್ಯಾನ್ಸರ್ ಭೀತಿಯಿಲ್ಲ, ಯಶಸ್ವಿಯಾದ ವಿಧಾನ.

ಕೆಲವು ಪ್ರಯೋಗಗಳಲ್ಲಿ ಕ್ಯಾನ್ಸರ್ ಭೀತಿ ಕಂಡು ಬಂದಿದೆ. ಆದ್ದರಿಂದ ಮರು ಪ್ರಯೋಗದ ಅವಶ್ಯಕತೆ ಇದೆಯೆಂದು ವಿಶ್ವ ಆರೋಗ್ಯ ಸಂಸ್ಥೆ ಹೇಳುತ್ತಿದೆ.

★ ಮರಳಿ ಗರ್ಭಧಾರಣೆ ಸಾಧ್ಯವಿದೆ.

ಸಾಧ್ಯವಿಲ್ಲ.

ಕುಟುಂಬ ಕಲ್ಯಾಣಕ್ಕೆ ಸಂತಾನ ನಿರೋಧ ಪ್ರಯೋಜಕವಾಗಬಹುದಾಗಿದೆ. ಆದರೆ ಅಪಾಯವಿಲ್ಲದೇ ಇರುವ ವಿಧಾನದ ಬಳಕೆಯ ಅಗತ್ಯವಾಗಿದೆ. ಅದಲ್ಲದೆ ಮಹಿಳೆಯ ಸಾಮಾಜಿಕ ಹಾಗೂ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸುವುದು ಅತ್ಯಗತ್ಯವಾಗಿದೆ. ಸರಕಾರ, ಔಷಧಿ ನಿಯಂತ್ರಣ ಅಧಿಕಾರಿಗಳು, ಕೆಲವೇ ವೈದ್ಯರು ಅಕ್ರಮವಾಗಿ ಉಪಯೋಗಿಸುತ್ತಿರುವ, ಈ ವಿಧಾನವನ್ನು ನಿಷೇಧಿಸದೇ ಮೂಕ ಪ್ರೇಕ್ಷಕರಾಗಿದ್ದಾರೆ. ಸರಕಾರ ಪುರುಷರು ಉಪಯೋಗಿಸಬಹುದಾದ ಸಂತಾನ ನಿರೋಧ ಕ್ರಮವನ್ನು ಹಾಗೂ ಮಹಿಳೆಯರಲ್ಲಿ ಸುರಕ್ಷಿತವಾಗಿ ಕಂಡು ಬಂದ ಸಂತಾನ ನಿರೋಧ ಕ್ರಮದ ಬಳಕೆಗೆ ಪ್ರೋತ್ಸಾಹ ಕೊಡುವುದು ಅಗತ್ಯವೆಂದೇ ಹೇಳಬಹುದು.

ಡಾ|| ಪ್ರಕಾಶ್ ಸಿ.ರಾವ್
ಕಾರ್ಯದರ್ಶಿ
ಔಷಧಿ ಕ್ರಿಯಾ ವೇದಿಕೆ - ಕರ್ನಾಟಕ
73/2 ಮೊದಲನೇ ಆರ್. ಬಡಾವಣೆ,
ರಾಜಾಜಿನಗರ, ಬೆಂಗಳೂರು - 560 -010

# ಸಾಹಿತ್ಯ ಸೃಷ್ಟಿಯ ನೂತನ ಪ್ರಯೋಗಗಳು

**ಪಾಲು : (ಕಥಾ ಸಂಕಲನ)**
**ಲೇ: ಡಾ|| ಎಂ.ಎಸ್. ವೇದಾ, ಸಂವಹನ, ಮೈಸೂರು, 1997**
**ಪುಟಗಳು : 130+iv ಬೆಲೆ ರೂ. 35/-**

ಡಾ|| ಎಂ.ಎಸ್. ವೇದಾ, ಕಿರಿಯ ವಯಸ್ಸಿನಲ್ಲೆ ವಿಶಿಷ್ಟ ರೀತಿಯ ಕಥಾರಚನೆ ಕೈಕೊಂಡು, ಹೆಚ್ಚಿನ ಭರವಸೆ ಮೂಡಿಸಿದವರು. ಅವರ 'ಪ್ರೀತಿ ಮತ್ತು ಸಾವು' ಸಂಕಲನ ಒಳ್ಳೆಯ ವಿಮರ್ಶೆಗೆ ಪಾತ್ರವಾಯಿತು. ಅದಾಗಲೇ ಅವರು ರೂಢಿಸಿಕೊಂಡಿರುವ ಗ್ರಾಮ್ಯಭಾಷೆ, ಗ್ರಾಮೀಣ ಅನುಭವಗಳ ಹಿನ್ನೆಲೆ ಹಾಗೂ ಆಧುನಿಕ ನಗರ ಜೀವನದ ತೊಯ್ದಾಟಗಳ ಒಳನೋಟಗಳನ್ನು ವಿಮರ್ಶಕರು ಗುರುತಿಸಿದ್ದರು. 'ಪಾಲು' ಕೂಡ, ಗ್ರಾಮ ಮತ್ತು ನಗರ ಜೀವನದ ತುಂಬ ಬೇರೆ ಹಿನ್ನೆಲೆಯಲ್ಲಿ ರೂಪಗೊಂಡು ಕಥೆಗಳ ಸಂಕಲನವಾಗಿದೆ.

'ಪಾಲು' ಕಥೆಯಲ್ಲಿ ತುಂಬ ಕಷ್ಟದಿಂದ ಮೂವರು ಗಂಡುಮಕ್ಕಳನ್ನು ಓರ್ವ ನಿಸ್ಸಹಾಯ ಮಗಳನ್ನು ಬೆಳೆಸಿದ ವಿಧವೆ ತಾಯವ್ವ, ಅವರ ಸ್ವಾರ್ಥ, ಸೋಮಾರಿತನ, ಹೇಡಿತನದಿಂದಾಗಿ, ಮನೆ-ಮಾರುಗಳ ಪಾಲಾಗುವುದನ್ನು ನೋಡುತ್ತಾಳೆ. ಸ್ವತಃ ಮಕ್ಕಳಿಂದ ವಂಚಿತಳಾದರೂ, ಅಭಿಮಾನ ಹಾಗೂ ಸ್ವಂತಿಕೆಗಳನ್ನು ಸಹ ಬಿಟ್ಟುಕೊಡದ ತಾಯಿಯೊಬ್ಬಳ ಗಟ್ಟಿ ಚಿತ್ರಣ ಕೊಡುತ್ತದೆ ಈ ಕತೆ. ನಗರದಲ್ಲಿ ಹುಟ್ಟಿ ಬೆಳೆದು ಆಕಸ್ಮಿಕವಾಗಿ ಮದುವೆಯೊಂದರ ಸಂದರ್ಭದಲ್ಲಿ ಹಳ್ಳಿಗೆ ಬರುವ ಕಿಶೋರಿಯೋರ್ವಳು ಕಣ್ಣಿಂದ ನೋಡಿದಂತೆ 'ಪರಕೀಯರು' ಕತೆ ಮೂಡಿ ಬಂದಿದೆ. ಗ್ರಾಮಸ್ಥರ ನಿಸ್ಸಂಕೋಚ ವರ್ತನೆ, ನೇರ(ಬಿರು)ನುಡಿ, ಅಜ್ಞಾನದ ಒರಟುಮಾತು, ಕೊಳಕುತನ, 'ಜುಗ್ಗ'ತನಗಳು ಮನುವನ್ನು ಕ್ಷಣಕ್ಷಣಕ್ಕೆ ತಬ್ಬಿಬ್ಬಾಗಿಸುತ್ತವೆ. ಕ್ರಮೇಣ ಸಾಂಸಾರಿಕ ವಿರಸಗಳು ಷಡ್ಯಂತ್ರಗಳು, ಕೊಲೆ, ಕ್ರೌರ್ಯ, ಲಂಚಗಳ ಇಣುಕುನೋಟಗಳು ಆ ಎಳೆಯ ಜೀವಿಯನ್ನು ಗಾಸಿಗೊಳಿಸಿಬಿಡುತ್ತವೆ. ಮುಗ್ಧಹೆಣ್ಣು, ಅಪರಿಚಿತವಾದ ಪರಿಸರವನ್ನು ಗ್ರಹಿಸುವ ಮತ್ತು ಅದಕ್ಕೆ ಪ್ರತಿಕ್ರಿಯಿಸುವ ಬಗೆಯನ್ನು ವೇದಾ ಸಮರ್ಥವಾಗಿ ಹೊರಗೆಡವಿದ್ದಾರೆ. ಕಿಶೋರ ಮಾನಸವನ್ನು ಕುರಿತಂತೆ ಹೆಚ್ಚು ಕತೆಗಳು ಕನ್ನಡದಲ್ಲಿ ಇಲ್ಲ. ಇದ್ದರೂ ಪ್ರೇಮ, ಪ್ರಣಯ ಕನಸುಗಳಾಚೆ ಸರಿಯುವುದಿಲ್ಲ. ಅಲ್ಪಕಾಲದಲ್ಲಿ ಅನಾಥಪ್ರಜ್ಞೆಯ ತನ್ನವರೊಂದಿಗಿದ್ದರೂ ಕಿರಿಯಳೋರ್ವಳು, ವಿಚಿತ್ರ ಪರಕೀಯತೆಯನ್ನು ಅನುಭವಿಸುವ ಸಶಕ್ತ ಪ್ರಯೋಗ, 'ಪರಕೀಯರು' ಕಥೆಯಲ್ಲಿದ್ದು ತುಂಬ ಸೊಗಸಾಗಿದೆ.

ಹಳ್ಳಿಗರು ನೀರಿಗಾಗಿ ಹಲುಬಿ, ವರ್ಷವರ್ಷವೂ ಕಂಗಾಲಾಗುವುದನ್ನು ತಪ್ಪಿಸಲು ಸರಕಾರದ ನೆರವಿನಿಂದ, ಬಹಳಷ್ಟು ಕಷ್ಟಪಟ್ಟು ಕೊನೆಗೊಮ್ಮೆ ನೆರೆಹಳ್ಳಿಗೆ ಬಂದ ಕಾಲುವೆ ನೀರು ತಮ್ಮ ಗ್ರಾಮದ ಬಳಿಯೂ ಹರಿದುಹೋಗುವಂತೆ ಮಾಡುವದರಲ್ಲಿ ಯಶಸ್ವಿಯಾಗುತ್ತಾರೆ. ಆದರೆ ಆ ಕಾಲುವೆಗೆ ಸಂಬಂಧಿಸಿದ ಕುತಂತ್ರ, ವಶೀಲಿ, ಸರಕಾರೀ ನಿರ್ಲಕ್ಷ್ಯ, ತಮ್ಮ ಜನರದೇ ಮೋಸದಿಂದಾಗಿ, ಕೊನೆಗೂ ನೀರಿನ ಪೂರೈಕೆ ನನಸಾಗದ ಪ್ರಸಂಗ 'ಕಾಲುವೆ' ಕತೆಯಲ್ಲಿದೆ. ನೀರುಣಿಸಲು ಬಂದ ಅರೆಮರುಳಿಯಂತೆ ತೋರುವ ಹೆಣ್ಣು, ಒಣಗಿನಿಂತ ಪೈರಿನೊಂದಿಗೆ ತನ್ನ ದುಃಖದ ಕತೆಯನ್ನು ತೋಡಿಕೊಳ್ಳುವ ಹೊಸಬಗೆಯ ತಂತ್ರವನ್ನು ಲೇಖಕಿ ಕತೆಗೆ ಬಳಸಿದ್ದಾರೆ.

'ಗೌರಿ ಬಂದಳು ಯಾತರ ಮ್ಯಾಲೆ?' ಯುಗಾದಿ ಹಬ್ಬದ ಹಿನ್ನೆಲೆಯಲ್ಲಿ ಎಳೆಯ ಹುಡುಗಿಯ, ವಯಸ್ಕಳ, ಸಂಸಾರಿಗನ, ಹಾಗೂ ಉಪೇಕ್ಷೆಗೆ ಒಳಗಾದ ವಿವಾಹಿತೆಯ ದೃಷ್ಟಿಯಲ್ಲಿ ಬಾಳು ಹಾಗೂ ಗೋಳಿನ ಚಿತ್ರಣದ ಪ್ರಯತ್ನವಿದೆ. ಗೌರಿಪೂಜೆಯ ಸಂಪ್ರದಾಯದ ಸಾಂಕೇತಿಕತೆ, ಅದರ ಪರಿಚಯವಿಲ್ಲದ ಓದುಗರಿಗೆ ಕೂಡಲೇ ಅರ್ಥವಾಗುವುದಿಲ್ಲ.

'ಕ್ಷಿತಿಜದಾಚಿನ ನೋಟಗಳು' ಯಶಸ್ವಿ ಡಾಕ್ಟರ್ ದಂಪತಿಗಳ ಸಂಸಾರ, ವೃತ್ತಿಯ ಯಶಸ್ಸು, ಪರಸ್ಪರ ತಿಳುವಳಿಕೆಗಳ ಹೊಂದಾಣಿಕೆಯ ಯತ್ನವನ್ನು ವಸ್ತುವಾಗಿ ಹೊಂದಿದೆ. ಪ್ರೀತಿ-ಪ್ರಾಮಾಣಿಕತೆಗಳೇ ಸುಖಿ ದಾಂಪತ್ಯಕ್ಕೆ ನೆಲೆಗಟ್ಟು ಎಂದು ನಂಬಿದ ಮನಸ್ವಿನಿ ವೈದ್ಯವೃತ್ತಿಯಲ್ಲಿ ಪಳಗಿದವಳು, ಮನುಷ್ಯರ ದುರ್ಬಲ ಅಂಶಗಳನ್ನು ಅರಿತವಳು. ಆವಳ ಪತಿಯ ವಿವಾಹ ಬಾಹ್ಯಸಂಬಂಧದ ಕುರಿತಾದ ವರದಿಗಳೊಂದೂ ವಿಶ್ವಾಸಾರ್ಹವೆನಿಸುವುದಿಲ್ಲ. ತನ್ನಲ್ಲಿ ಆತ ಯಾವ ಕೊರತೆಕಂಡನೆಂದು ಅರ್ಥವಾಗದೇ ಕೊನೆಗೊಮ್ಮೆ ಕೇಳಿದ ಖಚಿತ ವರದಿಯ ಇತ್ಯರ್ಥಕ್ಕಾಗಿ ಹೊರಟು, ತನ್ನೊಬ್ಬ ಸ್ನೇಹಿತೆಯೇ ಪತಿಯ ಪ್ರೇಯಸಿಯೂ, ಹೆಣ್ಣು ಮಗುವೊಂದರ ತಾಯಿಯೂ ಆಗಿರುವುದನ್ನು ಕಾಣುತ್ತಾಳೆ. ಇನ್ನೊಬ್ಬಳ ಬಾಳಿನ ಕೊರತೆ ತುಂಬಿದ್ದಾನೆ ತನ್ನ ಪತಿ ಎಂದು ಆಳವಾಗಿ ಯೋಚಿಸಿದ ಆಕೆ ಉದಾತ್ತತೆಯ ಮೂರ್ತಿಯಾದಾಗ, ಅದನ್ನರಿತ ಪತಿ, ಪತ್ನಿಯೇ ನಂಬದ ದೌರ್ಬಲ್ಯಕ್ಕೆ ಒಳಗಾದದ್ದಕ್ಕೆ ದುಃಖಿಸಿ ದೌರ್ಬಲ್ಯದ ಸಂಬಂಧವನ್ನು ಅಂತ್ಯಗೊಳಿಸಲು ನಿರ್ಧರಿಸಿ, ಸ್ನೇಹಿತೆಯ ಮನೆಗೆ ಬಂದಾಗ ತಾನಾಗಿಯೇ ಅದನ್ನು ಕೊನೆಗಾಣಿಸಿದ ಆಕೆಯ ಸಂದೇಶ ಹೊತ್ತ ಪತ್ರ ಬೀಗಹಾಕಿದ ಮನೆಯಲ್ಲಿ ಆತನಿಗೆ ಎದುರಾಗುತ್ತದೆ. 'ಕ್ಷಿತಿಜದಾಚಿನ ನೋಟಗಳು' ಎಂಬ ಅರ್ಥಗರ್ಭಿತ ಶೀರ್ಷಿಕೆ ಕೊಟ್ಟ

ಈ ಕಥೆಯಲ್ಲಿ ಮೇಲ್ನೋಟಕ್ಕೆ ಅಸಾಧ್ಯವೆನಿಸುವ ವಸ್ತು ಇದ್ದರೂ, ಅಸಂಭವವೆನಿಸದಂತೆ ಹೆಣೆಯಲಾಗಿದೆ. ಸುಸಂಸ್ಕೃತ, ನಾಗರಿಕವಾದ ಸ್ವತಂತ್ರ ವ್ಯಕ್ತಿತ್ವವನ್ನು ದೃಢವಾಗಿ ರೂಪಿಸಿಕೊಂಡ ಮೂವರು ವ್ಯಕ್ತಿಗಳಲ್ಲಿ ಮಾನವೀಯ ಸಂಬಂಧಗಳು ಸಹಜಸಾಧ್ಯವಾಗಿ ಬೆಳೆದರೂ ಹಾಗೇ ಉಳಿದು ಬಂದಾವೇ! ಎಂಬ ಅಂಶವನ್ನು ವೇದಾ ಮುಪ್ಪುರಿಯಾಗಿ ಮೂಡಿಸಿ ಓದುಗರನ್ನು ಯೋಚಿಸಲು ಹಚ್ಚುತ್ತಾರೆ.

'ಸೃಷ್ಟಿ' ಕತೆಯಲ್ಲಿ ಮಹಿಳಾ ಲೇಖಕಿಯರು ಕಥೆ-ಕಾದಂಬರಿಗಳ ವಸ್ತುವಿಗಾಗಿ ತಡಕಾಡುವ ಹಾಗೂ ಕೃತಿಯನ್ನಾಗಿಸುವ ಆತುರ-ಚಾಪಲ್ಯಗಳ ಕುರಿತಾದ ಸೂಕ್ಷ್ಮ ವ್ಯಂಗ್ಯವಿದೆ! ಬದುಕು ಎನ್ನುವುದು ಎರಡು ಪ್ಲಸ್ ಎರಡು ನಾಲ್ಕು ಎಂಬಂತೆ ಸೂತ್ರಬದ್ಧವಾಗಿ ನಡೆಯಲಾರದು. 'ಕನಸುಗಳ ಮಾರಾಟ' ಮಾಡುವ ಜನಪ್ರಿಯ ಲೇಖಕಿಯರ, ಬದುಕನ್ನು ಕುರಿತಾದ ದೃಷ್ಟಿಕೋನವನ್ನು ಖಂಡಿಸುವ ಪರಿಯಲ್ಲಿ ಕಥೆ ಸಾಗುತ್ತದೆ. ಕಥಾಶಿಬಿರದಲ್ಲಿ ಪಾಲುಗೊಂಡಿದ್ದ ಕಿರಿಯ ವಯಸ್ಸಿನ ಆದರೆ ಗಂಭೀರ ಚಿಂತನೆಯ ಲೇಖಕಿಯೊಬ್ಬಳು ಆದಾಗಲೇ ಹೆಸರಾಂತ ಲೇಖಕಿಗೆ ಪತ್ರ ಬರೆದಂತೆ ತಂತ್ರವನ್ನು ಈ ಕತೆಗೆ ಡಾ॥ ವೇದಾ ಅಳವಡಿಸಿದ್ದಾರೆ. ಬದುಕನ್ನು ಬರಹವಾಗಿಸುವಲ್ಲಿ ಲೇಖಕಿಯರು ಎದುರಿಸುವ ಸಮಸ್ಯೆಯ ನೆವದಲ್ಲಿ ಸರಳೀಕೃತ-ಗೊಳ್ಳುವ, ಪ್ರಗತಿಗಾಮಿ ಎಂದು ತೋರುವ ಆದರೆ ಆಳವಿಲ್ಲದ ಬರವಣಿಗೆಯನ್ನು ಪ್ರಸ್ತಾಪಿಸಿದ್ದಾರೆ. ಬದುಕಿನ ಸತ್ಯ ಇವೆರಡು ದೃಷ್ಟಿಕೋನಗಳ ನಡುವೆ ಇರಬಹುದೆಂದು ಕಿರಿಯ ಬರಹಗಾತಿಯು ತನ್ನ ಈ ಅನಿಸಿಕೆಗೆ ಶಿಬಿರಾರ್ಥಿಗಳಾಗಿ ಬಂದ ಇತರ ಕತೆಗಾತಿಯರ ಜೀವನ, ನಿಲುವುಗಳನ್ನು ಚರ್ಚಿಸುತ್ತಾಳೆ. ಸಾಹಿತ್ಯ ಸೃಷ್ಟಿಯ-ತೊಡಕುಗಳನ್ನು ಲೇಖಕಿ ಪತ್ರಕಥೆಯ ರೂಪದಲ್ಲಿ ಚರ್ಚಿಸುವುದು, ನೂತನ ಪ್ರಯೋಗವೆನಿಸುತ್ತದೆ.

'ಹೋಗಿಬರಲೆ ಭರತ' ಹಾಗೂ 'ಮರಳಿಬಾರದ ಶಕುಂತಲೆ' ಎಲ್ಲರಿಗೂ ಪರಿಚಿತವಿದ್ದ ದುಷ್ಯಂತ ಶಕುಂತಲೆಯರ ಕಥೆಗೆ ನೀಡಿದ ಹೊಸ ಆಯಾಮಗಳನ್ನು ಹೊಂದಿವೆ. ಇಲ್ಲಿಯ ಪ್ರೌಢವಯಸ್ಸಿನ ಶಕುಂತಲೆ ಜೀವನದ ಆಗುಹೋಗುಗಳನ್ನು ನಿರ್ಲಿಪ್ತತೆಯಿಂದ ಗ್ರಹಿಸಬಲ್ಲಾಕೆ. ತನ್ನನ್ನು ತ್ಯಜಿಸಿದ ದುಷ್ಯಂತನ ಬಗ್ಗೆ ಅವಳಿಗೆ ಪ್ರತಿಶೋಧದ ವಿಚಾರವಿಲ್ಲ. ನ್ಯಾಯವು ಒಂದಿಲ್ಲೊಂದು ದಿನ ಸಿಕ್ಕೀತು! ಎಂಬ ಸಹನೆ ಇದೆ. ಮಗ, ಬೆಳೆಯುತ್ತ ಬಂದು, ಆತನ ಭವಿಷ್ಯದ ಚಿಂತೆ ಕಾಡಿದಾಗ ಆತನೊಡನೆ ನೇರ ದುಷ್ಯಂತನ ಓಲಗಕ್ಕೆ ಹೋಗಿ ಅರಸನ ಪ್ರತಿಜ್ಞೆಯನ್ನು ನೆನಪಿಸಿಕೊಡುವ ಧೈರ್ಯವಿದೆ. ದೃಢತೆಯಿಂದ ಮಗನನ್ನು ದುಷ್ಯಂತನಿಗೆ ಒಪ್ಪಿಸಿ ಮಹಾರಾಣಿಯ ಪದವಿ ನಿರಾಕರಿಸಿ ತಾನು ಆಶ್ರಮಕ್ಕೆ ಮರಳಿ ಹೋಗುವ ವಿರಕ್ತೆಯನ್ನು 'ಹೋಗಿ ಬರಲೇ ಭರತ'ದಲ್ಲಿ ಕಂಡರಿಸಿದ್ದಾರೆ ಲೇಖಕಿ.

'ಮರಳಿ ಬಾರದ ಶಕುಂತಲೆ'ಯಲ್ಲಿ ಮಗನ ಮೂಲಕ ತನ್ನ ಅನನ್ಯತೆಯನ್ನು ಗುರುತಿಸಿಕೊಳ್ಳಲು ಯತ್ನಿಸಿ ಸೋತ ಶಕುಂತಲೆಯ ಚಿತ್ರವಿದೆ. ಮಗನನ್ನು ಕರೆದುಕೊಂಡು ಆಸ್ಥಾನಕ್ಕೆ ಹೋಗಿ ತಾನು ರಾಣಿಯಾಗುವ ಸಾಧ್ಯತೆಯನ್ನು ತಳ್ಳಿಹಾಕಿದವಲು, ಭರತನನ್ನು ಕಾಣಲು ಹಪಹಪಿಸುತ್ತಾಳೆ. ಈಗ ಉಡಾಫೆ ಪುರುಷಾರ್ಥದ ಪ್ರಯೋಗಗಳಲ್ಲಿ ತೊಡಗಿದ ಮಗನಿಗೆ ತಾಯಿಯನ್ನು ಕಾಣಲು ಬಿಡುವಿಲ್ಲ! ಆದರೆ ಮೂವರು ಸೊಸೆಯರು ಬಂದು ಅತ್ತೆಯ ಆಶೀರ್ವಾದ ಪಡೆಯುತ್ತಾರೆ. ನಂತರ ಮೂವರು ಮೊಮ್ಮಕ್ಕಳನ್ನು ತೋರಿಸಲು ಬಂದಾಗ, ಭರತ, ತಂದೆಗಿಂತಲೂ ಹೆಚ್ಚಿನ ಸಂವೇದನಾಶೂನ್ಯತೆ, ನಿಷ್ಠುರತೆ ಹೊಂದಿರುವ ವಿಚಾರ ತಿಳಿದು ಗಾಬರಿಯಾಗುತ್ತಾಳೆ. ಮಕ್ಕಳು ತನ್ನಂತಿಲ್ಲ! ಎಂಬ ಆಪಾದನೆ ಅವನದು. ಅದಕ್ಕೆ ಉತ್ತರವಾಗಿ, ಭರತನ ಹಿನ್ನೆಲೆಯ ಪರಿಚಯ ನೀಡಿ ಹೆಣ್ಣುಮಕ್ಕಳ ಕುರಿತಾದ ಅನುಮಾನ, ಅವಮಾನಗಳು ತರವಲ್ಲ-ವೆಂದು ಸಂದೇಶವನ್ನು ಕಳಿಸುತ್ತಾಳೆ. ಆದರೆ ಅವು ಮಗನ ಕಿವಿಮುಟ್ಟುವುದೇ ಇಲ್ಲ. ನಂಜಿನ ಮಾತುಗಳನ್ನು ಕೇಳಲಾಗದೇ ಸೊಸೆಯರು ತಮ್ಮ ಕಂದಮ್ಮಗಳನ್ನು ಕೈಯಾರೆ ಕೊಂದುಹಾಕಿದ ಸಮಾಚಾರ ಶಕುಂತಲೆಗೆ ತಲುಪುತ್ತದೆ. ''ಕಾಲ, ಹೆಣ್ಣುಮಕ್ಕಳ ಪಾಲಿಗೆ ಸದಾ ದುರ್ವಿಧಿಯಾಗಿ ವರ್ತಿಸಿದೆ. ವಿಪರೀತವಾಗಿ ನಡೆದು-ಕೊಂಡಿದೆ.... ಒಂದೇ ಸಮಾಧಾನವೆಂದರೆ ಆ ಮೂವರೂ ಮಕ್ಕಳೂ ಬೆಳೆದು ಸೃಷ್ಟಿಸಬಹುದಾಗಿದ್ದ ಮತ್ತೆ ಒಂದಷ್ಟು ಶಕುಂತಲೆಯರ ಸೃಷ್ಟಿ ನಿಂತಿತಲ್ಲ'' ಎಂಬ ನಿರಂತರವಾದ ವಿಡಂಬನೆಯ ಉಲ್ಲೇಖ, ಕತೆಯ ಕೊನೆಯಲ್ಲಿ ಬರುತ್ತದೆ.

ವಿಷಯ ವೈವಿಧ್ಯ, ಭಾಷೆ, ತಂತ್ರಗಳ ಸಾಧ್ಯತೆಗಳನ್ನು 'ಪಾಲು' ಸಂಗ್ರಹದ ಹತ್ತುಕತೆಗಳಲ್ಲಿ ಡಾ॥ ಎಂ.ಎಸ್. ವೇದಾ ಚೆನ್ನಾಗಿ ದುಡಿಸಿಕೊಂಡಿದ್ದಾರೆ. ಮೈಸೂರು ಸೀಮೆಯ ಗ್ರಾಮೀಣಭಾಷೆಯ ಅವರ ಹಿಡಿತ ಅಪೂರ್ವವಾದದ್ದು. ಮುಖ್ಯವಾಗಿ, ಕಥಾವಿವರಣೆ-ಯಲ್ಲಿ ಆಡುಭಾಷೆಯ ಓಟದ ಸ್ವತಂತ್ರಶೈಲಿಯನ್ನು ರೂಢಿಸಿ-ಕೊಂಡಿದ್ದಾರೆ. ಗ್ರಾಮ್ಯ ಪರಸರ ಹಾಗೂ ನಾಗರಿಕ ಅನುಭವಗಳ ಹಿನ್ನೆಲೆಯಲ್ಲಿ ಮೂಡಿಬಂದ ಕತೆಗಳು ಅಪೂರ್ವ ಕತೆಗಾತಿಯಾಗಿ ಅವರು ಭವಿಷ್ಯದಲ್ಲಿ ಬೆಳೆಯಬಹುದಾದ ಸೂಚನೆ ಕೊಡುತ್ತವೆ. ಸ್ತ್ರೀವಾದಿ ಚಿಂತನವಿದ್ದರೂ ಕತೆಗಳು ಇಲ್ಲಿ ಕಲಾತ್ಮಕವಾಗಿದ್ದು ವಿಶಿಷ್ಟವಾಗಿ ನಿಲ್ಲುತ್ತವೆ. ಕತೆಗಳ ಬೆಳವಣಿಗೆಯತ್ತ ಹೆಚ್ಚಿನ ಲಕ್ಷ್ಯ ಪೂರೈಸುವಂತೆ ವೇದಾ ಅವರು ಯತ್ನಿಸಿದ್ದು ಈಗ ತೋರ್ಪಡಿಸಿದ ಭರವಸೆಯನ್ನು ಶಾಶ್ವತವಾಗಿ ಉಳಿಸಿಕೊಳ್ಳಬಲ್ಲರು.

**ಡಾ. ಜ್ಯೋತ್ಸ್ನಾ ಕಾಮತ್**

# ಸಮೃದ್ಧ ಮಾಹಿತಿ: ಕುತೂಹಲಕಾರಿ ಒಳನೋಟ

**ದ್ರೌಪದಿ : ಒಂದು ಅಧ್ಯಯನ**
**ಲೇ: ಡಾ|| ಎಸ್.ಎ. ಪ್ರಭಾವತಿ**
**ಅಪರ್ಣಾ ಪ್ರಕಾಶನ, ಬೆಂಗಳೂರು. 1996**
**ಪುಟಗಳು : IX+141 ಬೆಲೆ : ರೂ.50/-**

'ದ್ರೌಪದಿ - ಒಂದು ಅಧ್ಯಯನ' ಹೆಸರೇ ಹೇಳುವಂತೆ ಮಹಾಭಾರತದ ಒಂದು ಮುಖ್ಯಪಾತ್ರವಾದ ದ್ರೌಪದಿಯನ್ನು ಕುರಿತ ಕೃತಿ. ಕನ್ನಡ ಸಾಹಿತ್ಯದಲ್ಲಿ ಮಹಾಭಾರತದ ಕಥೆಯನ್ನು ಹೊಂದಿರುವ ಎಲ್ಲ ಪ್ರಕಾರಗಳ ಕೃತಿಗಳನ್ನೂ ಅವುಗಳನ್ನು ಕುರಿತು ಬಂದಿರುವ ವಿಮರ್ಶೆಯನ್ನೂ ಗಮನಿಸಿರುವ ಲೇಖಕಿ ತಮ್ಮ ಸ್ವಂತ ನಿಲುವನ್ನು ಸೂಕ್ತ ಸಂದರ್ಭಗಳಲ್ಲಿ ಸ್ಪಷ್ಟವಾಗಿ ವ್ಯಕ್ತಪಡಿಸುತ್ತಾರೆ. ವ್ಯಾಸರಚಿತವಾದ ಮಹಾಭಾರತವೇ ಅಲ್ಲದೆ ಇತರ ಸಂಸ್ಕೃತ ಕೃತಿಗಳನ್ನೂ ಅವರು ಗಮನಿಸಿದ್ದಾರೆ. ಭಾಸನ ನಾಟಕಚಕ್ರದ 'ಕರ್ಣಭಾರ', 'ದೂತವಾಕ್ಯ', 'ದೂತಘಟೋತ್ಕಚ', 'ಮಧ್ಯಮವ್ಯಾಯೋಗ', 'ಪಂಚರಾತ್ರ' ಹಾಗೂ 'ಊರುಭಂಗ'ಗಳಲ್ಲಿ ದ್ರೌಪದಿಯ ನೇರವಾದ ಪ್ರವೇಶವೇ ಇಲ್ಲದಿರುವುದು, 'ಪಂಚರಾತ್ರ'ದಲ್ಲಿ ಯಾವುದೇ ಸ್ತ್ರೀಪಾತ್ರ ಇಲ್ಲದಿರುವುದು ಮೊದಲಾ ಅಂಶಗಳನ್ನು ಅವರು ಗಮನಿಸಿದ್ದಾರೆ. ಭಾರವಿಯ 'ಕಿರಾತಾರ್ಜುನೀಯಂ', ಭಟ್ಟನಾರಾಯಣನ 'ವೇಣೀಸಂಹಾರ', ಕ್ಷೇಮೇಂದ್ರನ 'ಭಾರತಮಂಜರಿ' ಕೃತಿಗಳಲ್ಲಿ ದ್ರೌಪದಿಯ ಪಾತ್ರದ ವಿವಿಧಮಗ್ಗುಲುಗಳನ್ನು ಪ್ರಭಾವತಿ ಸೂಕ್ಷ್ಮವಾಗಿ ವಿವೇಚಿಸಿದ್ದಾರೆ. ಜೊತೆಗೆ ಕನ್ನಡದ ಕವಿಗಳಾದ ಪಂಪ, ರನ್ನ, ಕುಮಾರವ್ಯಾಸರು ಸಂಸ್ಕೃತದ ಕವಿಗಳಿಂದ ಪಡೆದ ಪ್ರೇರಣೆ, ಪ್ರಭಾವಗಳನ್ನು ಸಹ ಗುರುತಿಸಿದ್ದಾರೆ. ಜೈನಮಹಾಭಾರತ, ಹರಿದಾಸರ ಕೀರ್ತನೆಗಳು, ಜಾನಪದ ಸಾಹಿತ್ಯ, ಸಂಪ್ರದಾಯರ ಹಾಡುಗಳು, ವೃತ್ತಿರಂಗಭೂಮಿ, ಆಧುನಿಕ ಕನ್ನಡಸಾಹಿತ್ಯ ಮೊದಲಾದ ಕ್ಷೇತ್ರಗಳಲ್ಲಿನ ದ್ರೌಪದಿಗೆ ಸಂಬಂಧಿಸಿದ ಎಲ್ಲ ಮಾಹಿತಿಯೂ ಈ ಪುಸ್ತಕದಲ್ಲಿ ಮೊದಲ ಬಾರಿಗೆ ಒಂದೇ ಕಡೆ ಸಿಗುತ್ತದೆ. ಲೇಖಕಿಯ ಸತತ ಪರಿಶ್ರಮದಿಂದ ಮಾತ್ರ ಇದು ಸಾಧ್ಯವಾಗಿದೆ.

ಅಪಾರ ಮಾಹಿತಿಯನ್ನು ತಮ್ಮ ಎದುರಿಗೆ ಇಟ್ಟುಕೊಂಡ ಪ್ರಭಾವತಿ ಅನೇಕ ಕತೂಹಲಕಾರಿ ಸಂಗತಿಗಳನ್ನು ಗುರುತಿಸುತ್ತಾರೆ. ಮಹಾಭಾರತದಲ್ಲಿ ಮೂಲಪಾಠಕ್ಕಿಂತ ಪ್ರಕ್ಷಿಪ್ತ ಭಾಗಗಳಲ್ಲೇ ದ್ರೌಪದಿಯ ಪಾತ್ರ ಹೆಚ್ಚು ಮಿನುಗಿರುವುದನ್ನು ಅವರು ಹೇಳುತ್ತಾರೆ. ಈ ಪ್ರಕ್ಷೇಪಗಳು ಉತ್ತರಕ್ಕಿಂತ ದಕ್ಷಿಣದಲ್ಲಿ ಹೆಚ್ಚಾಗಿ ನಡೆದಿರುವ ಕುತೂಹಲಕರ ವಿಷಯವನ್ನೂ ಅವರು ಹೊರಗೆಡಹುತ್ತಾರೆ. ಬೌದ್ಧಮೂಲದ ಮಹಾಭಾರತವು ಕೌರವಸ್ತುತಿಯಾಗಿದ್ದು ಕರ್ಣ ಇದರ ನಾಯಕನಾಗಿದ್ದ. ಅದು ಶೈವಾನುಸಾರಿಯಾದ ನಿಲುವಿನ ಕಾಲ. ಮುಂದೆ ಚಾರಿತ್ರಿಕವಾಗಿ ಘಟಿಸಿದ ಏರುಪೇರುಗಳಿಂದ ಕೌರವಸ್ತುತಿಯೂ ಶೈವಾನುಕೂಲ ನಿಲುವೂ ಹಿಂದೆ ಸರಿದು ಬ್ರಾಹ್ಮಣಕವಿಗಳು ಮಾಡಿದ ವೈಷ್ಣವಪರವಾದ ವಿಪುಲ ಪ್ರಕ್ಷೇಪಗಳಿಂದ ಇಂದಿನ ಮಹಾಭಾರತ ಉದಯಿಸಿತೆಂಬ ವಿದ್ವಾಂಸರ ಊಹೆಯನ್ನು ಲೇಖಕಿ ಅರಿತಿದ್ದಾರೆ. ಇಲ್ಲೂ ಸಹ ಯಾವ ಸಣ್ಣ ವಿವರವೂ ಅವರ ಕಣ್ಣು ತಪ್ಪಿಸಿಲ್ಲ.

ಪಾಂಚಾಲಿ, ಯಜ್ಞೋದ್ಭವೆ, ಕೃಷ್ಣೆ ಮುಂತಾಗಿಯೂ ಗುರುತಿಸಲ್ಪಡುವ ದ್ರೌಪದಿ ತನ್ನ ಪಂಚಪತಿತ್ವದಿಂದ ಉಂಟುಮಾಡಿಕೊಂಡಿರುವ ಪ್ರಶ್ನೆಗಳಿಗೆ, ಅವುಗಳ ವಿವಿಧ ಉತ್ತರಗಳಿಗೆ ಕೊನೆಮಿತಿ ಎಂಬುದಿಲ್ಲ. ಆ ಕಾರಣಕ್ಕಾಗಿ ಉಂಟಾಗಿರುವ ಚರ್ಚೆಯಲ್ಲಿ ಪರವಿರೋಧ ನಿಲುವುಗಳು ನಿರಂತರವಾಗಿ ವ್ಯಕ್ತವಾಗುತ್ತಲೇ ಇವೆ. ಕಥೆ ಕೃತಿರೂಪಕ್ಕೆ ಬರುವ ಹೊತ್ತಿಗೆ ಈ ಬಗ್ಗೆ ಅಸಮಾಧಾನದ ನಿಲುವು ಇದ್ದಿತೆಂಬುದು ಕಥೆಯಲ್ಲೇ ಕಾಣುವ ದ್ರೌಪದಿಯನ್ನು ಕುರಿತ ನಿಂದೆಯ ಮಾತುಗಳಿಂದ ವ್ಯಕ್ತವಾಗುತ್ತದೆ. ಮುಂದೆ ಹನ್ನೆರಡು ವರ್ಷಗಳ ವನವಾಸದ ಅವಧಿಯಲ್ಲಿ ಅವಳು ಪಟ್ಟ ತೊಂದರೆಗಳು ಅವಳ ಛಲವನ್ನು ಪ್ರಚೋದಿಸಿದವು. ವನವಾಸಕಾಲದ ಅವಳಿಗೆ ಸಂಬಂಧಿಸಿದ ಮುಖ್ಯಘಟನೆಗಳಾದ ದೂರ್ವಾಸಾತಿಥ್ಯ, ಜಂಬೂಫಲವಿಷಯ, ದ್ರೌಪದೀಹರಣಗಳು - ಮೂರೂ ಪ್ರಕ್ಷೇಪಗಳ ಪಟ್ಟಿಯಲ್ಲಿವೆ - ಅವಳ ಕೃಷ್ಣಭಕ್ತಿಯ ನಿದರ್ಶನಗಳೂ ಆಗಿವೆ. ಅಜ್ಞಾತವಾಸದಲ್ಲಿನ ಕೀಚಕನ ವಧೆ ದ್ರೌಪದಿಯ ಹಠದಿಂದಲೇ ನೆರವೇರುವುದು ಮುಂದಿನ ಕುರುಕ್ಷೇತ್ರದ ಯುದ್ಧಕ್ಕೂ ಅವಳು ಚಾಲನಶಕ್ತಿಯಾಗುವುದರ ಸಂಕೇತವೆಂಬಂತಿದೆ. ಅಂತ್ಯದಲ್ಲಿ ಅವಳು ತನ್ನನ್ನು ಅವಮಾನಿಸಿದವರಿಗೆ ಶಾಸ್ತಿಯಾದದ್ದನ್ನು ಕಂಡಳು. ಆದರೆ ಈ ತೃಪ್ತಿಗಾಗಿ ಅವಳು ಬಹಳ ಬೆಲೆ ತೆರಬೇಕಾಯಿತು. ತಂದೆ, ಅಣ್ಣ ಹಾಗೂ ಮಕ್ಕಳನ್ನು ಅವಳು ಯುದ್ಧದಲ್ಲಿ ಕಡಿದುಕೊಂಡಳು. ಅಕ್ಷಯವಸ್ತ್ರ, ಅಕ್ಷಯಪಾತ್ರೆಗಳಂತೆ ಅಕ್ಷಯಸಂತಾನ ಆಗಲಿಲ್ಲ. ಅಂತ್ಯದ ಈ ಘೋರದುಃಖ ಅವಳಂಥವಳನ್ನೂ ಅಲುಗಾಡಿಸಿ ಅಂತಿಮಗೆಲುವನ್ನು ನೀರಸವಾಗಿಸುತ್ತದೆ.

ಕನ್ನಡಸಾಹಿತ್ಯದಲ್ಲಿ ದ್ರೌಪದಿ ಆದಿಕವಿ ಪಂಪನ 'ವಿಕ್ರಮಾರ್ಜುನ ವಿಜಯ'ದಲ್ಲಿಯೇ ಕಾಣಿಸಿಕೊಳ್ಳುತ್ತಾಳೆ. ವ್ಯಾಸರಿಗೆ ಪಂಪ ಋಣಿಯಾಗಿದ್ದರೂ ಅವನ ಕಾವ್ಯ ವ್ಯಾಸಕೃತಿಯ ಪ್ರತಿಬಿಂಬವಲ್ಲ. ಜೈನಭಾರತ ಪರಂಪರೆಯ ಒಲವೂ ಅವನಿಗಿರಲಿಲ್ಲ. ಆಶ್ರಯದಾತ

ಅರಿಕೇಸರಿಯನ್ನು ಕಥಾನಾಯಕ ಅರ್ಜುನನೊಂದಿಗೆ ಅಭೇದಕಲ್ಪನೆ ಮಾಡಿದ್ದರಿಂದ ದ್ರೌಪದಿಯ ಪಂಚಪತಿತ್ವಕ್ಕೆ ಅಡ್ಡಿ ಬಂತು. ಜೈನ-ಪರಂಪರೆಯನ್ನು ಅನುಸರಿಸದೆ ಕಥಾಭಿತ್ತಿಯ ವೈಶಾಲ್ಯವನ್ನು ಉಳಿಸಿ-ಕೊಂಡ ಕವಿ ಆಶ್ರಯದಾತನಿಗೆ ತೋರಿಸಿದ ನಿಷ್ಠೆಯ ಉರುಳಿನಲ್ಲಿ ಸಿಲುಕಿ ದ್ರೌಪದಿಗೆ ವಾಕ್‌ಪತಿತ್ವವನ್ನು ಅನುಗ್ರಹಿಸಿ ಅವಳ ಪಾತ್ರದ ಸಂಕೀರ್ಣತೆಗೆ ಭಂಗತಂದ ಪಂಪನ ಕಾಲದ ಸಾಮಾಜಿಕ, ಧಾರ್ಮಿಕ ಒತ್ತಡಗಳೂ ಅವನ ಈ ಕಾರ್ಯಕ್ಕೆ ಕಾರಣವಾಗಿರಬಹುದು. ಮಿಕ್ಕಂತೆ ಪಂಪನಿಂದ ದ್ರೌಪದಿಗೆ ನ್ಯಾಯ ಸಂದಿದೆ ಎನ್ನಬಹುದು. ಅವಳ ಸ್ವಯಂವರ, ಕಪಟದ್ಯೂತಪ್ರಸಂಗಗಳಲ್ಲಿ ಅವಳ ಉಜ್ವಲನಿಲುವನ್ನು ಪಂಪ ಮುಕ್ತಕಂಠದಿಂದ ಸಾರುತ್ತಾನೆ. ವಸ್ತ್ರಾಪಹರಣವನ್ನು ಆತ ಬಿಸಿಕೆಂಡದಂತೆ ಕೈಬಿಡಲು ಆಕೆ ಕಾವ್ಯದಲ್ಲಿ ಅರಿಕೇಸರಿಯ ಪತ್ನಿಯಾಗಿದ್ದು ಕಾರಣ. ಜೊತೆಗೆ ಆ ಸಂದರ್ಭದ ಕೃಷ್ಣಕೃಪೆಯ ಅಂಶವೂ ಅವನ ನಿರ್ಲಕ್ಷ್ಯಕ್ಕೆ ಒಳಗಾಗಿದೆ. ರಾಜಸೂಯ ಯಾಗದ ಜಲದಿಂದ ಪವಿತ್ರವಾದ ಅವಳ ಕೂದಲನ್ನು ಹಿಡಿದೆಳೆದದ್ದೇ ಪ್ರಸಂಗದ ತೀವ್ರತೆಯನ್ನು ಸೂಚಿಸಲು ಅವನ ಮಟ್ಟಿಗೆ ಸಾಕು. ಇಷ್ಟಾಗಿಯೂ ಮೂಲದ ಪಂಚಪತಿತ್ವದ ಇಕ್ಕಟ್ಟುಗಳಿಂದ ಪಂಪ ಪಾರಾಗಲು ಪೂರ್ಣವಾಗಿ ಸಾಧ್ಯವಾಗದೆ ಅದರ ಫಲವಾಗಿ ದ್ರೌಪದಿ ಶಿಕ್ಷೆ ಅನುಭವಿಸಬೇಕಾಗಿ ಬಂತು. ಅರ್ಜುನನ ಪಟ್ಟಾಭಿಷೇಕದ ಹೊತ್ತಿನಲ್ಲಿ ಅವಳು ಹಿಂದೆ ಸರಿದು ಸುಭದ್ರೆಗೆ ಸ್ಥಳ ನೀಡಬೇಕಾಗುತ್ತದೆ.

ರತ್ನನ 'ಸಾಹಸಭೀಮ ವಿಜಯ'ದಲ್ಲಿ ಭಾರತದ ಕಥೆ ಸಿಂಹಾವಲೋಕನಕ್ರಮದಲ್ಲಿ ರೂಪಿತವಾಗಿದ್ದರಿಂದ ರನ್ನ ಅನೇಕ ಬಿಕ್ಕಟ್ಟುಗಳಿಂದ ತಪ್ಪಿಸಿ ಕೊಂಡಿದ್ದಾನೆ. ಮುಖ್ಯವಾಗಿ ದ್ರೌಪದಿಯ ಪಂಚಪತಿತ್ವ ಅವನಿಗೆ ನುಂಗಲಾರದ ತುತ್ತಾಗಿಲ್ಲ. ಆಶ್ರಯದಾತ ಸತ್ಯಾಶ್ರಯನೊಂದಿಗೆ ಸಮೀಕರಿಸಲ್ಪಟ್ಟ ಭೀಮನೊಬ್ಬನಿಗೇ ದ್ರೌಪದಿ ಪತ್ನಿ ಎಂದು ಎತ್ತರದ ದನಿಯಲ್ಲಿ ಹೇಳದೆಯೇ ಆ ಭಾವನೆ ಬರುವಂತೆ ಆತ ನಿರ್ವಹಿಸಿದ್ದಾನೆ. ಈ ಕಾರಣದಿಂದ ದುರ್ಯೋಧನ ವಧೆಯ ನಂತರ ಅತಿ ಸಹಜವೆಂಬಂತೆ ಅವಳು ಭೀಮನೊಂದಿಗೆ ಪಟ್ಟವನ್ನೇರುತ್ತಾಳೆ. ಮೊದಲ ಮತ್ತು ಕಡೆಯ ಅಧ್ಯಾಯಗಳಲ್ಲಿ ಮಾತ್ರ ದ್ರೌಪದಿಯ ಪ್ರವೇಶ. ಮಿಕ್ಕ ಮಧ್ಯದ ಅಧ್ಯಾಯಗಳಲ್ಲಿ ದುರ್ಯೋಧನನ ದುರಂತಚಿತ್ರಣವೇ ಕವಿಯ ಮನಸ್ಸನ್ನು ಸೆಳೆದಿದೆ. ಈ ಸಂದರ್ಭದಲ್ಲಿ ''ಮಹಾಮಾರಿಯೇ ಮಾಯಾವಿದ್ಯೆಯಿಂದ ಸುಂದರ ರಮಣಿಯಾಗಿ ಸುಳಿದಳಲ್ಲದೆ ದ್ರೌಪದಿಯೇನು ಸಾಮಾನ್ಯಳೆ ? ಸೀತೆಯಂತೆ ಸಾತ್ವಿಕ ಗುಣಸಂಪನ್ನೆಯೆ? ದುರ್ಯೋಧನನು ಅಧರ್ಮಿಯಾದರೆ ದ್ರೌಪದಿ ನಿರಪರಾಧಿಯೆಂದು ನಾವು ಹೇಳಬಹುದೆ?'' ಎಂಬ ಎಂ.ಆರ್.ಶ್ರೀ. ಅವರ ಮಾತಿಗೆ ಪ್ರಭಾವತಿಯವರು ತೀವ್ರವಾಗಿ ಪ್ರತಿಕ್ರಿಯಿಸಿದ್ದಾರೆ. ದ್ರೌಪದಿಯನ್ನು ಕುರಿತು ಅವರು, ''ಸೀತೆಯಂತೆ ಅಸಹಜ ಸಂಯಮದಿಂದ ಸ್ತ್ರೀವರ್ಗಕ್ಕೆ ಅಸಹಜ ಮಾದರಿಯಾಗದೆ, ನೇರವಾಗಿ ಮಣ್ಣಿನಿಂದ ಎದ್ದುಬಂದ ಗುಣದಿಂದಾಗಿ ಸಹಜವಾಗಿ ತೋರುತ್ತಾಳೆ'' (ಪು.77) ಎನ್ನುತ್ತಾರೆ. ದ್ರೌಪದಿಯ ಮಣ್ಣಿನ ಗುಣ ಹೊಗಳಿಕೆಗೆ ಅರ್ಹ ನಿಜ. ಆದರೆ ಸೀತೆಯದು ಮಾತ್ರ ಏನು? ಅವಳ ಪಾತ್ರದಲ್ಲಿ ಎಲ್ಲೂ ಕರ್ತವ್ಯ ವಿಮುಖತೆ ಇಲ್ಲ. ಕಷ್ಟಕ್ಕೆ ಹಿಂಜರಿಯುವ ರೀತಿಯನ್ನು ಅವಳು ಎಲ್ಲೂ ತೋರಿಸುವುದಿಲ್ಲ. ವನವಾಸ, ಅಗ್ನಿಪರೀಕ್ಷೆ ಮೊದಲಾದ ಕಠಿಣವಾಸ್ತವಗಳನ್ನು ಅವಳು ಎದುರಿಸಿ ಗೆದ್ದವಳು. ಋಷ್ಯಾಶ್ರಮದಲ್ಲಿ ಅವಳಿಮಕ್ಕಳ ಪೋಷಣೆಯನ್ನು ಪತಿಯ ನೆರವಿಲ್ಲದೆ ನಡೆಸಿದವಳು. ನಮ್ಮ ಆಧುನಿಕ ಮಹಿಳೆಯರನೇಕರ ಸಿಂಗಲ್ ಪೇರೆಂಟಿಂಗ್‌ಗೆ ಅವಳೇ ಮೊದಲ ಸ್ಫೂರ್ತಿ! ಹೊಣೆ ಮುಗಿಸಿದ ಮೇಲೆ ತನ್ನ ತಾಯೆಡೆಗೆ ತೆರಳಿದಳು. ಪತಿಯಿಂದ ಒಮ್ಮೆ ಪರಿತ್ಯಕ್ತೆಯಾದ ಅವಳು ಈಗ ತಾನೇ ಎಲ್ಲವನ್ನೂ ತ್ಯಜಿಸಿ ಹೊರಟುಹೋದಳು. ಅವಳ ಔನ್ನತ್ಯ 'ಅಸಹಜ ಮಾದರಿ' ಹೇಗಾದೀತು? ನಿಜದಲ್ಲಿ ಸೀತೆಯ ಪಾತ್ರ ಸಹಜಗ್ರಹಿಕೆಗೆ ಸುಲಭವಾಗಿ ನಿಲುಕದಷ್ಟು ಕಠಿಣ, ಪ್ರಭಾವತಿಯವರು ದ್ರೌಪದಿಯ ಪ್ರಭಾವದಲ್ಲಿ ಪೂರ್ಣ ಸಿಕ್ಕಿಬಿಟ್ಟರೇ ಎಂಬ ಸಂಶಯ ಇಂಥ ಕಡೆಗಳಲ್ಲಿ ಉದಯಿಸುತ್ತದೆ.

ಕುಮಾರವ್ಯಾಸನ 'ಕರ್ಣಾಟ ಭಾರತ ಕಥಾಮಂಜರಿ'ಯಲ್ಲಿ ಕವಿಯ ದೃಷ್ಟಿಕೋನ ಪಂಪರನ್ನರಿಗಿಂತ ಭಿನ್ನ ಎಂಬುದು ಸ್ಪಷ್ಟ. ಕೃಷ್ಣ ಇಲ್ಲಿನ ಮೂಲಚೈತನ್ಯ. ಆದರೆ ದ್ರೌಪದಿಯ ಪಾತ್ರದ ಮಹತ್ವ ಕುಂದಿಲ್ಲ. ಕೃಷ್ಣನ ನಂತರ ನಮ್ಮ ಮನಸ್ಸನ್ನು ಅಪಹರಿಸುವವಳು ಅವಳೇ. ಅವಳ ಕೃಷ್ಣಭಕ್ತಿ, ಪಾತಿವ್ರತ್ಯಗಳು ಕವಿಯ ಕೃಪೆಗೆ ಪಾತ್ರವಾದ ಅಂಶಗಳು. ಅವಳ ಅಪ್ರತಿಮ ಸೌಂದರ್ಯ, ಛಲಗಳು ಅವಳ ಪಾತ್ರಕ್ಕೆ ಕಾವು ಕೂಡಿಸಿದ ಗುಣಗಳು. ಅಕ್ಷಯವಸ್ತ್ರ ಪ್ರಸಂಗದಲ್ಲಿ ಕೃಷ್ಣನ ಭಕ್ತವಾತ್ಸಲ್ಯ, ದ್ರೌಪದಿಯ ಅನನ್ಯಶ್ರದ್ಧೆಯ ಹಿರಿಮೆಗಳೆರಡನ್ನೂ ಗುರುತಿಸಬಹುದು. ಕವಿಗೆ ಕೃಷ್ಣ ಎಂದರೆ ಗದುಗಿನ ವೀರನಾರಾಯಣ, ದ್ರೌಪದಿಯ ಮೊರೆ ನಿಜದಲ್ಲಿ ಅವನದೇ ಆರ್ತ ಹೃದಯದಿಂದ ಹೊಮ್ಮಿದ ಕರೆ. ಪಂಪರನ್ನರಲ್ಲಿ ಇಲ್ಲದ ಈ ಪ್ರಸಂಗ ಕುಮಾರ-ವ್ಯಾಸನಲ್ಲಿ ರಸಘಟ್ಟಿಯಂತೆ ಸ್ಪಷ್ಟವಾಗಿದೆ. ಕೀಚಕವಧೆಗೆ ಮೊದಲು ವ್ಯಕ್ತವಾಗುವ ದ್ರೌಪದಿಯ ಅಳಲು, ರೋಷಗಳು ಸಹ ಅವಳ ಪಾತ್ರದ ಪ್ರಖರತೆಗೆ ಸಾಕ್ಷಿಯಾಗಿವೆ.

ಜೈನಭಾರತಗಳಲ್ಲಿ ನೇಮಿನಾಥನ ಕಥೆಯೊಂದಿಗೆ ಹರಿವಂಶ, ಕುರುವಂಶಗಳ ಚರಿತ್ರೆಗಳೂ ಹೆಣೆದುಕೊಳ್ಳುತ್ತವೆ. ಜಿನಸೇನಾ-ಚಾರ್ಯರ 'ಹರಿವಂಶಪುರಾಣ' ಮತ್ತು ಗುಣಭಕ್ತರ 'ಉತ್ತರ-ಪುರಾಣ'ಗಳು ಜೈನಭಾರತಗಳಿಗೆ ಆಕರಗಳು. ಕನ್ನಡದಲ್ಲಿ ಒಂಬತ್ತು ಜನ ಕವಿಗಳು ನೇಮಿನಾಥ ಪುರಾಣಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ಉಪಲಬ್ಧವಾಗಿರುವುವು ಕಡೆಯ ಎಂಟು ಕಾವ್ಯಗಳು. ಇವುಗಳಲ್ಲಿ ಜೈನಪರಂಪರೆಗೆ ತಕ್ಕಂತೆ ಭವಾವಳಿಗಳ ವಿವರಗಳಿವೆ. ಆದರೆ

ಜೈನಕವಿಗಳು ದ್ರೌಪದಿಯ ಪಂಚಪತಿತ್ವವನ್ನು ಒಪ್ಪಿಕೊಳ್ಳಲಿಲ್ಲ. ಅವಳು ಅರ್ಜುನನಿಗೆ ಮಾತ್ರ ಹೆಂಡತಿ. ಜೊತೆಗೆ ಇಲ್ಲಿ ವಸ್ತ್ರಾಪಹರಣ ಪ್ರಸಂಗ, ಕೀಚಕವಧೆ ಮೊದಲಾದ ಪ್ರಸಂಗಗಳೇ ಇಲ್ಲ. ವನವಾಸ-ಕಾಲದ ದ್ರೌಪದೀಹರಣ ಪ್ರಸಂಗದ ಮೇಲೆ ರಾಮಾಯಣದ ಸೀತಾಪಹರಣ ತನ್ನ ಪ್ರಭಾವ ಬೀರಿದೆ. ವನವಾಸದ ನಂತರ ದ್ರೌಪದಿ ಪಾಂಡವರ ಜೊತೆಗೆ ಅಜ್ಞಾತವಾಸಕ್ಕೆ ಹೋಗದೆ ತವರಿಗೆ ಹೋಗಿ-ಬಿಡುವುದರಿಂದ ಆ ಕಾಲದ ಅವಳ ಪ್ರಾಮುಖ್ಯಕ್ಕೆ ಪೆಟ್ಟು ಬಿದ್ದಿದೆ. ವಾಸ್ತವವಾಗಿ ಜೈನಭಾರತಗಳಲ್ಲಿ ನೇಮಿನಾಥನೇ ಪ್ರಮುಖ ಪಾತ್ರ. ಪಾಂಡವರಾಗಲೀ ಕೌರವರಾಗಲೀ ಇಲ್ಲಿ ಮುಖ್ಯರಲ್ಲ. ಕೃಷ್ಣಮಹಿಮೆ ಸಹ ಇಲ್ಲಿ ಪ್ರಖರವಲ್ಲ. ದ್ರೌಪದಿಯ ಸಂಕೀರ್ಣ ವ್ಯಕ್ತಿತ್ವವನ್ನು ಬಿಂಬಿಸುವ ಅವಳ ಜೀವನದ ಮಹತ್ವದ ಮಜಲುಗಳು ಜೈನದೃಷ್ಟಿಕೋನಕ್ಕೆ ಬಾಧಕ ಅಂಶಗಳಾಗಿರುವುದರಿಂದ ಅಂಥವನ್ನು ಕೈಬಿಡುವುದೋ ತಿರುಚುವುದೋ ನಡೆಯುತ್ತದೆ.

ಹರಿದಾಸರ ಕೃತಿಗಳಲ್ಲಿ ದ್ರೌಪದಿಯ ಚಿತ್ರಣ ಕುಮಾರವ್ಯಾಸನಿಂದ ಪ್ರಭಾವಿತವಾಗಿರುವುದು ಸುಸ್ಪಷ್ಟ. ಸ್ತ್ರೀಯರೇ ರಚಿಸಿದ 'ಸಂಪ್ರದಾಯದ ಹಾಡುಗಳು' ಸ್ತ್ರೀಯರ ಭಕ್ತಿನಿವೇದನೆಗೆ ಒಂದು ಮಾಧ್ಯಮವಾಗಿದೆ. ಆದರೆ ಜಾನಪದ ಸಾಹಿತ್ಯದಲ್ಲಿ ನಮಗೆ ನಿಜವಾದ ಅಚ್ಚರಿ ಎದುರಾಗುತ್ತದೆ. ಇವರು ಮಾಡಿಕೊಳ್ಳುವ ಬದಲಾವಣೆಯ ವ್ಯಾಪ್ತಿ ಅಪರಿಮಿತ. ಹೆಚ್ಚು ಮಾನವೀಯವಾದ, ಶಿಷ್ಟತೆಗೆ ಗಮನಕೊಡದ ಕಥನ ಇತರರದು. ಕುವೆಂಪು ಅವರ 'ಶ್ಮಶಾನ ಕುರುಕ್ಷೇತ್ರ'ದಲ್ಲಿ ದ್ವಾಪರ, ಕಲಿಗಳೇ ಪ್ರಮುಖರು. ಕೈಲಾಸಂ ರಚಿಸಿ, ಜಿ.ಪಿ. ರಾಜರತ್ನಂ ಅವರು ಅನುವಾದಿಸಿರುವ 'ಕೀಚಕ'ನಾಟಕದಲ್ಲಿ ಕೀಚಕ ಉದಾತ್ತಪುರುಷ. ಕೃಷ್ಣಮೂರ್ತಿ ಪುರಾಣಿಕರ 'ಸೈರಂಧ್ರಿ', ಕಮಕೋಡು ನರಸಿಂಹಶಾಸ್ತ್ರಿಗಳ 'ಶಸ್ತ್ರಸನ್ಯಾಸ' ಹನುಮಂತರಾವ್ ಭೀಮರಾವ್ ಅವರ 'ಬಾಣಸಿಗ ಭೀಮ' ಮತ್ತು 'ಕುರುಕ್ಷೇತ್ರ' ನಾಟಕಗಳು ಅನಂತರದವು. ಎಲ್.ಎಸ್. ವೆಂಕಟೇಶಮೂರ್ತಿಯವರ 'ದ್ರೌಪದಿಯ ಸ್ವಗತ' ನಾಟಕ ಇತ್ತೀಚಿನ ಸೇರ್ಪಡೆ. ಮಣಿಮಾಲಿನಿ-ಯವರ ಪಿಎಚ್.ಡಿ. ಪ್ರಬಂಧ ದ್ರೌಪದಿಯನ್ನು ಕುರಿತದ್ದು. ಎಸ್.ಎಲ್. ಭೈರಪ್ಪನವರ ಕಾದಂಬರಿ 'ಪರ್ವ' ದ್ರೌಪದಿಯ ಪಾತ್ರವನ್ನು ಅತ್ಯಂತ ಸ್ಫುಟವಾಗಿ ಕಂಡರಿಸುತ್ತದೆ. ದ್ರೌಪದಿ ಇಲ್ಲಿ ಸೂಕ್ಷ್ಮ ಸಂವೇದನೆಗಳ ಧೈರ್ಯಶಾಲಿನಿ. ಪ್ರಭಾವತಿಯವರೇ ಬರೆದ 'ದ್ರೌಪದಿ' ಕಾದಂಬರಿಯು ಅವಳು ಪ್ರಶ್ನಿಸಬಲ್ಲ ಶಕ್ತಿ ಇರುವ ಅಪರೂಪದ ಸ್ತ್ರೀ. ತನ್ನ ಮಕ್ಕಳ ಬಗ್ಗೆ ಅತೀವ ಕಳಕಳಿ ಇರುವವಳು. ಆಧುನಿಕ ಜಗತ್ತಿನ ಕೆಲವು ಸ್ವಾರಸ್ಯದ ಸಂಗತಿಗಳನ್ನೂ ಪ್ರಭಾವತಿ ದಾಖಲಿಸಿದ್ದಾರೆ. ಕೆಲವರು ಆದಿವಾಸಿಗಳು ಇಂದಿಗೂ ಬಹುಪತಿತ್ವದ ಪದ್ಧತಿಯನ್ನು ಹೊಂದಿದ್ದಾರೆ ಎಂಬುದೂ ತಾವು ಪಾಂಡು-ವಂಶಜರೆಂದು ಹೇಳಿಕೊಳ್ಳುತ್ತಾರೆ ಎಂಬುದೂ ಅಂಥದೊಂದು ಉದಾಹರಣೆ.

ನಮ್ಮ ದೇಶದ ರಾಷ್ಟ್ರೀಯ ಮಹಾಕಾವ್ಯಗಳಲ್ಲಿ ಒಂದು ಎನ್ನಿಸಿಕೊಂಡಿರುವ ಮಹಾಭಾರತದ ಒಂದು ಮುಖ್ಯಪಾತ್ರವಾದ ದ್ರೌಪದಿಯ ವ್ಯಕ್ತಿತ್ವ ಅತ್ಯಂತ ಉಜ್ವಲವೂ ಜಟಿಲವೂ ಆದದ್ದು. ವಾಸ್ತವವಾಗಿ ಅವಳು ಭಾರತ ಕಥೆಯ ಬಹುಮುಖ್ಯ ಸತ್ವವೇ ಆಗಿದ್ದಾಳೆ. ಅವಳ ಜೀವಂತಿಕೆಗೆ ಅವಳ ಪಾತ್ರದ ಸೂಕ್ಷ್ಮತೆಯೇ ಸಾಕ್ಷಿ. ಅವಳು ಯಾವಾಗಲೂ ಸ್ವಾಭಿಮಾನ, ಧೈರ್ಯ, ಅಂತಃಕರಣಗಳಿಗೆ ಬೆಲೆ ಕೊಟ್ಟವಳು.

ಪ್ರಭಾವತಿಯವರು ಪ್ರಸ್ತುತ ಕೃತಿಯಲ್ಲಿ ದ್ರೌಪದಿಗೆ ಸಂಬಂಧಿಸಿ-ದಂತೆ ಅಪಾರವಾದ ತಾಳ್ಮೆಯಿಂದ ಸಮೃದ್ಧವಾದ ಮಾಹಿತಿ ಸಂಗ್ರಹವನ್ನು ಮಾಡಿದ್ದಾರೆ. ಅವಳನ್ನೂ ಕುರಿತು ಶ್ರದ್ಧೆಯಿಂದ ಆಳವಾದ ಅಧ್ಯಯನ ಮಾಡಿದ್ದಾರೆ. ಸ್ಪಷ್ಟ ತೀರ್ಮಾನಗಳನ್ನು ತಲುಪಿದ್ದಾರೆ. ಈ ಎಲ್ಲ ಕಾರಣಗಳಿಂದ ಅವರು ಅಭಿನಂದನಾರ್ಹ-ರಾಗಿದ್ದಾರೆ.

**-ಡಾ|| ಎಚ್.ಎಸ್. ಸುಜಾತಾ**

## ಹೆಜ್ಜೆ ಮೂಡಿಸಿದ ಮಾನಿನಿ

*ಆಂಧ್ರದ ಗುಂಟೂರು ಜಿಲ್ಲೆಯ ಹಳ್ಳಿಯೊಂದರಲ್ಲಿ 1889ರಲ್ಲಿ ಹುಟ್ಟಿದ ಯಾಮಿನೀ ಪೂರ್ಣ ತಿಲಕಮ್ಮ 'ದೇವದಾಸಿ' ಮನೆತನಕ್ಕೆ ಸೇರಿದವರು. ಮನೆಯ ಪರಿಸರದ ಒತ್ತಡದಿಂದಾಗಿ ಎಳವೆಯಲ್ಲೇ ವೇಶ್ಯಾವೃತ್ತಿಗಿಳಿದು ಸುಮಾರು 18 ವರ್ಷಗಳವರೆಗೆ ಆ ಬಾಳು ಬಾಳಿದ್ದ ಯಾಮಿನೀ 1923 ರಲ್ಲಿ ಗಾಂಧೀಜಿಯವರಿಂದ ಪ್ರಭಾವಿತರಾಗಿ ತಮ್ಮ ಮನೆತನದ ವೃತ್ತಿ ಬಿಟ್ಟು ಹೊರಬಂದರು. ''ಹಿಂದೂ ಯುವತಿ ಶರಣಾಲಯ'' ಎಂಬ ಸಂಸ್ಥೆಯನ್ನು ಸ್ಥಾಪಿಸಿ, ವೇಶ್ಯಾವೃತ್ತಿಯ ನಿರೋಧಕ್ಕಾಗಿ ದುಡಿಯತೊಡಗಿದರು. ದೇವದಾಸಿಯರ ಪುನರುದ್ಧಾರಕ್ಕೆ ಕಂಕಣ ಬದ್ಧರಾಗಿ ದುಡಿಯುತ್ತ ''ಹಿಂದೂ ಯುವತಿ'' ಎಂಬ ಪಾಕ್ಷಿಕಪತ್ರಿಕೆಯನ್ನು ಹೊರತರಲು ಪ್ರಾರಂಭಿಸಿದರು. ಮಾತೃಭಾಷೆಯಾದ ತೆಲುಗಿನಲ್ಲೂ, ಇಂಗ್ಲಿಷ್ ಭಾಷೆಯಲ್ಲೂ ಆಳವಾದ ವಿದ್ವತ್ತನ್ನು ಪಡೆದಿದ್ದು 'ಕೆಸರಿನ ಕಮಲ'ವೆಂಬ ಪ್ರತೀಕವನ್ನು ನಿಜವಾಗಿಸಿ ಬದುಕಿದಾಕೆ.*

# ಸಾಮಾಜಿಕ ಅಸಮಾನತೆ ವಿರುದ್ಧ ದನಿ ಎತ್ತುವ 'ಮೃತ್ಯುದಂಡ್'

ಸ್ತ್ರೀ ಪ್ರಜ್ಞೆಯನ್ನು ರೂಪಿಸುವ 'ಮೃತ್ಯುದಂಡ' ಒಂದು ಗಮನಾರ್ಹ ಚಿತ್ರ. ಹಾಡು, ನೃತ್ಯಗಳಂಥ ಮುಖ್ಯವಾಹಿನಿ ಚಿತ್ರದ ಮಾಮೂಲು ಸೂತ್ರಗಳಿದ್ದರೂ 'ಮೃತ್ಯುದಂಡ' ಇಂದಿನ ಚಿತ್ರ ಜಗತ್ತಿನಲ್ಲಿ ಮುಖ್ಯವೇಕಾಗುತ್ತದೆಯೆಂದರೆ ಅದು ಸಾಮಾಜಿಕ ವ್ಯವಸ್ಥೆಯಲ್ಲಿನ ಅಸಮಾನತೆ, ಅನ್ಯಾಯವನ್ನು ಪ್ರಶ್ನಿಸುತ್ತಾ ಹೋಗುತ್ತದೆ. ಲಿಂಗ ಅಸಮಾನತೆಯನ್ನು ತೋರಿಸುವ ಚಿತ್ರದಲ್ಲಿ ಊಳಿಗಮಾನ್ಯ ವ್ಯವಸ್ಥೆ ಇನ್ನೂ ಜೀವಂತವಾಗಿರುವುದನ್ನು ಸ್ಪಷ್ಟಪಡಿಸುತ್ತದೆ. ಈ ವ್ಯವಸ್ಥೆಯಲ್ಲಿ ಮಹಿಳೆಯನ್ನು ದಮನಗೊಳಿಸುವ ರೀತಿ ಹಾಗೂ ಅವಳು ಅನುಭವಿಸುವ ನೋವನ್ನು ಮಾರ್ಮಿಕವಾಗಿ ಈ ಚಿತ್ರದಲ್ಲಿ ನಿರೂಪಿಸಲಾಗಿದೆ.

ಬಿಹಾರದ ಕುಗ್ರಾಮಗಳಲ್ಲಿ ಇಂದಿಗೂ ಬೇರೂರಿರುವ ಊಳಿಗಮಾನ್ಯ ವ್ಯವಸ್ಥೆ ಹಾಗೂ ಅದರಲ್ಲಿ ಬದುಕುವ ಜನರ ಕಥೆಯನ್ನು ಚಿತ್ರ ಹೇಳುತ್ತದೆ. ವಿಧವೆಯಾಗಿದ್ದವಳೊಬ್ಬಳು ಗರ್ಭಿಣಿಯಾಗುತ್ತಾಳೆ. ಅವಳನ್ನು ಅವಳ ತಾಯಿಯನ್ನೂ ಗ್ರಾಮದ ಜನರು ಅಟ್ಟಿಸಿಕೊಂಡುಹೋಗಿ ಕಲ್ಲು ಎಸೆದುಕೊಲ್ಲುವುದರೊಂದಿಗೆ ಚಿತ್ರದ ದೃಶ್ಯ ಆರಂಭಗೊಂಡು 'ಮೃತ್ಯುದಂಡ'ದ ಪ್ರಾಸ್ತಾವಿಕವನ್ನೂ ಹೇಳಲಾಗುತ್ತದೆ. ಚಿತ್ರದ ಅಂತ್ಯಕೂಡ 'ಮೃತ್ಯುದಂಡ'ದ ಪ್ರಯತ್ನದೊಂದಿಗೆ ಎಂಬುದು ಗಮನಾರ್ಹ. ವಿಧವೆಯನ್ನೂ ಕೊಂದ 'ಅರಣ್ಯನ್ಯಾಯ'ದಂಥದ್ದೇ ಪ್ರಯತ್ನ ನಡೆಯುತ್ತದೆ. ಆದರೆ ಅಂತ್ಯದಲ್ಲಿ ಅಂಥ ದಮನಕಾರಿ ಶಕ್ತಿಗಳ ವಿರುದ್ಧ ದಮನಕ್ಕೊಳಗಾದ ಸ್ತ್ರೀಯರು ಸಂಘಟನಾತ್ಮಕ ಶಕ್ತಿಯಾಗಿ ರೂಪುಗೊಳ್ಳುವುದರೊಂದಿಗೆ ಚಿತ್ರಕ್ಕೆ ಸ್ವಾಗತಾರ್ಹ ಅಂತ್ಯ ನೀಡಲಾಗುತ್ತದೆ. ಚಿತ್ರದ ಮುಖ್ಯ ಸ್ತ್ರೀಪಾತ್ರಗಳಾದ ಕೇತಕೀ (ಮಾಧುರಿದೀಕ್ಷಿತ್), ಚಂದ್ರಾವತಿ (ಶಬನಾಅಜ್ಮಿ) ಹಾಗೂ ಸೇವಕಿ ಕಾಂತಿ (ಶಿಲ್ಪಾ ಶಿರೋಡ್ಕರ್) ತಮ್ಮ ತಮ್ಮ ಪರಿಸ್ಥಿತಿಗಳಲ್ಲಿ ಸ್ತ್ರೀದಮನದ ವಿರುದ್ಧ ದನಿಗಳಾಗಿ ಹೊಮ್ಮುತ್ತಾರೆ. ಅಂತ್ಯದಲ್ಲಿ ಈ ಮೂವರ ದನಿಯೂ ಸ್ತ್ರೀ ಸಂಘಟನಾಶಕ್ತಿಯಾಗಿ ರೂಪುಗೊಳ್ಳುತ್ತದೆ.

ಜಮೀನ್ದಾರಿ ಕುಟುಂಬಕ್ಕೆ ಸೊಸೆಯಾಗಿ ಕೇತಕಿ ಬರುತ್ತಾಳೆ. ಜಮೀನ್ದಾರಿ ಪದ್ಧತಿಯ ವೈಭವದ ಹಿಂದಿರುವ ಪೊಳ್ಳುತನವನ್ನು ಅವಳು ಕಂಡುಕೊಳ್ಳುತ್ತಾಳೆ. ಅಲ್ಲಿನ ಆರ್ಥಿಕ ಸಂಕಷ್ಟಗಳನ್ನು ಅರಿಯುತ್ತಾಳೆ. ವಿದ್ಯಾವಂತೆಯಾದ ಕೇತಕಿ ತನ್ನ ಓರಗಿತ್ತಿ ಚಂದ್ರಾವತಿಯನ್ನು ಪ್ರಶ್ನಿಸುತ್ತಾ ಅವಳ ಮನಪರಿವರ್ತನೆಗೆ ನಾಂದಿ ಹಾಡುತ್ತಾಳೆ. ಷಂಡ ಪತಿಯನ್ನೇ ತನ್ನ ಸರ್ವಸ್ವ ಎಂದು ಚಂದ್ರಾವತಿ ಭಾವಿಸಿದ್ದರೂ ಬಂಜೆ ಎಂಬ ನಿಂದನೆಗೆ ಗುರಿಯಾಗುತ್ತಾಳೆ. ಈ ಪತಿ ಮಠಾಧಿಪತಿಯಾದಾಗ ಚಂದ್ರಾವತಿ ಪರಿತ್ಯಕ್ತ ಪತ್ನಿಯಾಗಿ ಬಿಡುತ್ತಾಳೆ. ಪತಿ ಸರ್ವಸ್ವ ಎಂದು ಭಾವಿಸಿದ್ದ ಅವಳಿಗೆ ಕೇತಕಿಯ ಪ್ರಶ್ನೆಗಳು ಹೃದಯ ತಟ್ಟುತ್ತದೆ. ಅವಮಾನ ಸಹಿಸಿ ಬದುಕುತ್ತಿದ್ದ ಅವಳು ಸ್ಥಾಪಿತ ಮೌಲ್ಯಗಳ ವಿರುದ್ಧ ಬಂಡೇಳುತ್ತಾಳೆ. ಗ್ರಾಮದ ಉನ್ನತ ಜಮೀನ್ದಾರರ ಕುಟುಂಬದ ಹಿರಿಯ ಸೊಸೆಯಾದ ಅವಳು ಕೆಳವರ್ಗದ, ಜಾತಿಯ ವ್ಯಕ್ತಿಯ ಜೊತೆ ಸಂಬಂಧ ಬೆಳೆಸಿ ಗರ್ಭಿಣಿಯಾಗುತ್ತಾಳೆ. 'ಬದುಕಿನಲ್ಲಿ ಮೊದಲಬಾರಿಗೆ ನನ್ನದೇ ಮರ್ಜಿಯಂತೆ ನಡೆದುಕೊಂಡಿದ್ದೇನೆ. (ಈ ವ್ಯವಸ್ಥೆಯ) ನಿಯಮಗಳನ್ನು ಗಾಳಿಗೆ ತೂರಿದ್ದೇನೆ. ಎಲ್ಲಿಯ ತನಕ ಇದನ್ನು (ನಿಯಮ) ಒಪ್ಪುವುದು?' ಎಂದು ತನ್ನ ಮನಸಮರ್ಥನೆ ಮಾಡಿಕೊಳ್ಳುತ್ತಾಳೆ. ಅಷ್ಟೇಅಲ್ಲ, ಮಗು ಯಾರದು ಎಂಬ ಕೇತಕಿಯ ಪ್ರಶ್ನೆಗೆ 'ನನ್ನದೇ' ಎಂಬ ಖಚಿತ ಉತ್ತರ ನೀಡುತ್ತಾಳೆ. ಇದು ಕೇತಕಿಯ ಮಾನಸಿಕ ಅನ್ವೇಷಣೆಗೂ ಪ್ರೇರಣೆ ನೀಡುತ್ತದೆ.

ಕಂಟ್ರಾಕ್ಟರ್‌ನ ಕುತಂತ್ರದಿಂದ ಗಂಡನ ಸಾವು ಸಂಭವಿಸಿದಾಗ ಕೇತಕಿ ಕುಸಿದು ಹೋಗುತ್ತಾಳೆ. ಆದರೆ ದಮನಗೊಂಡಿದ್ದ ಅವಳ ಮನಸ್ಸು ಪ್ರತೀಕಾರದತ್ತಲೇ ಇರುತ್ತದೆ. ಅವಳ ದಿಟ್ಟತನದ ಮಾತುಗಳು ಶೋಷಿತ ಸ್ತ್ರೀಯರಿಗೆ ಚೈತನ್ಯ ನೀಡುತ್ತದೆ, ಕಂಟ್ರಾಕ್ಟರ್‌ನಿಂದ ತೀವ್ರ ಶೋಷಣೆಗೆ ಒಳಗಾಗುವ ಕಾಂತಿಯ ಕಣ್ಣು ತೆರೆಸುತ್ತದೆ. ಹೀಗೆ ಮೂವರೂ ತಮ್ಮ ತಮ್ಮ ನೆಲೆಗಳಲ್ಲಿ ವಿರೋಧದ ದನಿ ಎತ್ತುತ್ತಾರೆ. ಮುಂದೆ ಅದು ಸಂಘಟಿತ ರೂಪಪಡೆದು ಚಿತ್ರಕ್ಕೆ ತೆರೆ ಬೀಳುತ್ತದೆ. ದಮನಕಾರಿಗಳನ್ನು ಕೊಲ್ಲಲು 'ಮೃತ್ಯುದಂಡ' ಒಯ್ಯುವ ಎಚ್ಚೆತ್ತ ಮಹಿಳಾಗುಂಪು ಕಾಣಿಸುತ್ತಾ ಹೋಗುತ್ತದೆ.

ಚಿತ್ರದ ಸಕಾರಾತ್ಮಕ ಅಂಶಗಳಂತೆಯೇ ಕೆಲವು ವಿರೋಧಾಭಾಸವೂ ಗಮನಾರ್ಹವಾಗಿವೆ. ಭಾಷಣಗಳನ್ನು ಮಾಡಿಸದೆಯೇ ಸಂಘಟನಾ ಶಕ್ತಿ ರೂಪುಗೊಳ್ಳುವುದು ಸ್ವಾಗತಾರ್ಹ. ಆದರೆ ಹೋರಾಟದ ರೂಪ ಮಾತ್ರ ಸಿನಿಮೀಯ. ಹೋರಾಟದ ಸ್ವರೂಪದಲ್ಲಿ ಸ್ತ್ರೀ, ಪುರುಷರನ್ನು ಬೇರ್ಪಡಿಸಲಾಗಿದೆ. ಕೇತಕಿ ಬಂದೂಕು ಹಿಡಿದು ಕಂಟ್ರಾಕ್ಟರ್ ಮೇಲೆ ಗುಂಡಿನ ಮಳೆಗರೆಯುವುದು, ಉಳಿದ ಸ್ತ್ರೀಯರು ಅವಳನ್ನು ಸುತ್ತುವರಿಯುವುದು.... ಇದರಲ್ಲಿ ಸ್ತ್ರೀಯರು ಮಾತ್ರ ಇರುವುದು ಸಿನಿಮೀಯವಲ್ಲದೆ ಮತ್ತೇನು? ಜೊತೆಗೆ ಬಂದೂಕು ಹಿಡಿದು ಕಾನೂನನ್ನೇ ನಮ್ಮ ಕೈಗೆತ್ತಿಕೊಳ್ಳುವುದು ನಾಗರೀಕ ಸಮಾಜದಲ್ಲಿ ಸಾಧುವೇ ಎಂಬ ಪ್ರಶ್ನೆಕೂಡ ಮೂಡುತ್ತದೆ. ಇಂಥ ಸಂದೇಶ, ಸೂಚನೆ ಎಷ್ಟು ಸರಿ?

ಇಷ್ಟೆಲ್ಲಾ ಇತಿಮಿತಿಗಳ ಮಧ್ಯೆಯೂ, ಬರೀ ಮಸಾಲೆ ಸಿನಿಮಾಗಳ ನಡುವೆಯೂ ಪ್ರಕಾಶ್‌ಝಾ ಸ್ತ್ರೀ ಪ್ರಜ್ಞೆಯನ್ನು ಚಿತ್ರಿಸುವ ಪ್ರಯತ್ನ ಮಾಡಿದ್ದಾರೆ. 'ದಾಮುಲ್'ನಂಥ ಉತ್ತಮ ಚಿತ್ರ ನೀಡಿದ್ದ ಝಾ, 'ಮೃತ್ಯುದಂಡ್' ಮೂಲಕ ಊಳಿಗಮಾನ್ಯ ವ್ಯವಸ್ಥೆ ವಿರುದ್ಧ ಸ್ತ್ರೀಶಕ್ತಿ ಸಂಘಟನೆಗೊಳ್ಳುವುದನ್ನು ಚಿತ್ರಿಸಿ ಗಮನಸೆಳೆದಿದ್ದಾರೆ.

-ಗೌರಿ.

## ರಾಷ್ಟ್ರೀಯತೆಯ ಇನ್ನೊಂದು ಮಗ್ಗುಲು

"ರಾಷ್ಟ್ರೀಯತಾವಾದಿ ಆಂದೋಲನವು ಭಾರತೀಯ ಮಧ್ಯಮವರ್ಗದ ಬುದ್ಧಿಜೀವಿಗಳ ಮೇಲೆ ಬಲವಾಗಿ ಹಿಡಿತ ಸಾಧಿಸತೊಡಗಿದಾಗ ಅದಕ್ಕಿಂತ ಮೊದಲು ಸಮಾಜಸುಧಾರಕರೆಲ್ಲರ ಮುಖ್ಯ ಕಾಳಜಿಗಳಾಗಿದ್ದ ಮಹಿಳಾ ಸಮಸ್ಯೆಗಳು ದಿಢೀರನೆ ಕಣ್ಮರೆಯಾದವು. ಇದೇಕೆ ಹೀಗಾಯಿತು? ಬಾಂಗ್ಲಾದೇಶದ ಇತಿಹಾಸಕಾರ ಗುಲಾಂ ಮುರ್ಷಿದ್ ಅವರು 19ನೇ ಶತಮಾನದ ನಡುಗಾಲದಲ್ಲಿ ಮಹಿಳೆಯರ ಸ್ಥಾನಮಾನವನ್ನು ಮೇಲೆತ್ತಲು ನಡೆದ ಪ್ರಯತ್ನಗಳೆಲ್ಲ ಭಾರತವು ಆಧುನೀಕರಣಕ್ಕೊಳಗಾಗುವ ಪ್ರಕ್ರಿಯೆಯ ಒಂದು ಭಾಗವಾಗಿತ್ತೆಂದು ಭಾವಿಸುತ್ತಾರೆ. ಇದೇ ರೀತಿ ಇನ್ನೂ ಹಲವರು, ಸಮಾಜ ಸುಧಾರಣಾ ಚಳವಳಿಗಳನ್ನು ಪಶ್ಚಿಮದ ಉದಾರವಾದಿ ವಿಚಾರಗಳಾಗಿದ್ದ ಸಮಾನತೆ, ವೈಚಾರಿಕ ಪ್ರಶ್ನೆಗಾರಿಕೆ, ವೈಯಕ್ತಿಕ ಅರ್ಹತೆಗಳಂಥ ಹೊಸ ಆದರ್ಶಗಳೊಂದಿಗೆ ಹೊಂದಿಕೊಂಡಿದ್ದವೆಂದು ಭಾವಿಸುತ್ತಾರೆ. ಆಧುನೀಕರಣವಾದಿಗಳು ಪರಂಪರೆಯತ್ತ ವಿಮರ್ಶಾತ್ಮಕವಾಗಿ ನೋಡಲು ಒತ್ತಾಯಿಸುತ್ತಿದ್ದರು. ಆದರೆ ರಾಷ್ಟ್ರೀಯತಾವಾದಿ ಸಾಂಸ್ಕೃತಿಕ ರಾಜಕೀಯವು ಗತಕಾಲವನ್ನು ವೈಭವೀಕರಿಸುತ್ತಾ, ದೇಶೀಯವಾದದ್ದು, ಭಾರತೀಯವಾದದ್ದು ಎಲ್ಲವನ್ನೂ ಸಮರ್ಥಿಸಿಕೊಳ್ಳಲೇ ಬೇಕೆಂದು ಒತ್ತಾಯಿಸತೊಡಗಿತು. ಹೀಗಾಗಿ ಸಾಂಪ್ರದಾಯಿಕ ಆಚರಣೆಗಳನ್ನು ಪ್ರಶ್ನಿಸುವ ಎಲ್ಲ ಯತ್ನಗಳನ್ನೂ "ಪಶ್ಚಿಮ"ದ್ದು ಆದ್ದರಿಂದ ರಾಷ್ಟ್ರವಿರೋಧಿ ಎಂದು ಖಂಡಿಸುವ ತಿರಸ್ಕರಿಸುವ ರೂಢಿ ಬೆಳೆಯಿತು"

- Women Writing in India. Vol.I.p.183

## ಅಪಹೃತ ಸ್ತ್ರೀಯರು

"ಸಾಮಾಜಿಕ, ಶೈಕ್ಷಣಿಕ ಕ್ಷೇತ್ರಗಳಲ್ಲಿ ಮಹಿಳೆಯರ ಪ್ರಗತಿಗಾಗಿ ಅರ್ಧಶತಮಾನಕಾಲ ಹೋರಾಡಿ ಕ್ರಾಂತಿಯನ್ನುಂಟುಮಾಡಿ ಯುಗಪ್ರವರ್ತನೆಯನ್ನೇ ಮಾಡಿದ ಮಹರ್ಷಿ ಕರ್ವೆಯವರು ಒಂದು ಬಾರಿ ಉದ್ಗಾರ ತೆಗೆದರು; 'ಅರ್ಧಶತಮಾನದ ಹಿಂದೆ ಇದ್ದ ಮಹಿಳೆಯರ ಸಮಸ್ಯೆ ಇಂದು ಸಮಸ್ಯೆಯಾಗಿ ಉಳಿದಿಲ್ಲ, ಆ ಸಮಸ್ಯೆಗೆ ಉತ್ತರ ದೊರೆತಿದೆಯೆಂದು ನಾವು ಇಂದು ತಿಳಿಯುವ ಸ್ಥಿತಿಯಲ್ಲಿದ್ದರೂ, ಸಮಸ್ಯೆಗಳೆಲ್ಲ ತೀರಿವೆ ಎಂದು ಹೇಳುವುದು ಸಾಧ್ಯವಿಲ್ಲ. ಹೊಸ ಸಮಸ್ಯೆಗಳು ಉದ್ಭವಿಸಿವೆ' ಎಂದು. ಸಾಮಾಜಿಕ, ರಾಜಕೀಯ, ಶೈಕ್ಷಣಿಕ ಸ್ಥಿತ್ಯಂತರಗಳಿಗೆ ಅನುಸಾರವಾಗಿ ಮಹಿಳೆಯರ ಸಾಮಾಜಿಕ ಜೀವನದಲ್ಲೂ ಎದ್ದು ಕಾಣುವಂತಹ ವ್ಯತ್ಯಾಸ ಕಂಡುಬರುತ್ತಿವೆ. ಬಾಲ್ಯ ವಿವಾಹ, ವಿಧವಾ ವಿವಾಹಗಳ ಪ್ರಶ್ನೆ ಹಣೆದುಕೊಂಡು ಅಂದು ಸಮಸ್ಯೆಯಾಗಿದ್ದರೆ, ಇಂದು ದೊಡ್ಡಸಂಖ್ಯೆಯಲ್ಲಿ ಪರಿತ್ಯಕ್ತೆಯರ ಪ್ರಶ್ನೆಯೂ ಎದ್ದು ನಿಂತಿದೆ...

.... ರಾಜಕೀಯ ವಿಪ್ಲವದಲ್ಲಿ ಹಿಂದೂಸ್ಥಾನದ ವಿಭಜನೆಯ ನಂತರ ನಿರಾಶ್ರಿತರ ಪ್ರಶ್ನೆಯಂತೂ ಸರಿ, ಅದರ ಜೊತೆಗೆ ಅಪಹೃತ ಸ್ತ್ರೀಯರ ಪ್ರಶ್ನೆ. ಸಂಕಟಗ್ರಸ್ತ ಸ್ತ್ರೀಯರ ಪ್ರಶ್ನೆ ರಾಷ್ಟ್ರದ ದೃಷ್ಟಿಯನ್ನೇ ಸೆಳೆಯಿತು. ನಿವಾಸಕ್ಕೆ ಅಲ್ಪ ಸ್ಥಾನ ದೊರೆತು ಕಾಲೂರಿದ ಕೂಡಲೇ ನೈತಿಕ ವಿಚಾರಣೆಗೆ ಪ್ರಾರಂಭವಾಯಿತು. ಸಂಕಟಕ್ಕೆ ಸಿಲುಕದವರು ಸಿಲುಕಿದವರನ್ನು ಅನೈತಿಕದೃಷ್ಟಿಯಿಂದಲೇ ಕಾಣತೊಡಗಿದರು. ಇದರಿಂದಾಗಿ ಅವರ ತೊಂದರೆ ಇನ್ನೂ ಹೆಚ್ಚಿತು! ಅಪಹೃತ ಸ್ತ್ರೀಯರನ್ನು ಮತ್ತೆ ಭಾರತಕ್ಕೆ ಕರೆತರಬೇಕೋ, ಬೇಡವೋ ಎನ್ನುವ ಪ್ರಶ್ನೆಯೂ ಎದ್ದು ಅಡಗಿತು!

ರಾಜಕೀಯ ಗಲಭೆಗಳಲ್ಲಿ, ಸಾಮಾಜಿಕ ಕ್ರಾಂತಿಕಾಲದಲ್ಲಿ ಅನಿವಾರ್ಯವಾಗಿ ಬಂದ ಎಡರುಗಳನ್ನು ಸಹಿಸಿ ಕ್ಷಮಿಸುವದೊಂದೇ ಮಾರ್ಗ. ಮಾನವತೆಯಿಂದ ಸಮಾಜದ ಒಕ್ಕಟ್ಟನ್ನು ಕಾಯ್ದುಕೊಳ್ಳುವುದೇ ಗುರಿ!"

- (ಮೇ 1956ರ "ವೀರಮಾತೆ" ಪತ್ರಿಕೆ ಸಂಪುಟ 4, ಸಂಚಿಕೆ 12ರ ಸಂಪಾದಕೀಯದಿಂದ)

Reg.No.Mag(5)PRC,DEGL 036/89/87

# ಭಾರತದ ಸ್ವಾತಂತ್ರ್ಯ ಸುವರ್ಣ ಮಹೋತ್ಸವ

## ಸತ್ಯ ಅಹಿಂಸೆ ಶಾಂತಿ ಸಹನೆ ಸಹಬಾಳ್ವೆಗಳಿಗೆ ದೃಢಸಂಕಲ್ಪ

ವಿಶ್ವ ಇತಿಹಾಸದಲ್ಲಿ ಭಾರತದ ಸ್ವಾತಂತ್ರ್ಯ ಹೋರಾಟ ಒಂದು ಅತ್ಯಪೂರ್ವ ಅಧ್ಯಾಯ. ಸ್ವಾತಂತ್ರ್ಯಗಳಿಕೆಯಲ್ಲಿ ಅದು ಅನುಸರಿಸಿದ ಸಂಯಮ ಮಾರ್ಗ ಜಗತ್ತಿಗೇ ಅನುಕರಣೀಯ. ಅದಕ್ಕಾಗಿಯೆ ಇತಿಕಾಸದಲ್ಲಿ ಅದಕ್ಕೆ ಅಗ್ರಪಟ್ಟ.

ಟಿಪ್ಪುಸುಲ್ತಾನ್, ಕಿತ್ತೂರುಚೆನ್ನಮ್ಮ, ಝಾನ್ಸಿರಾಣಿ ಲಕ್ಷ್ಮೀಬಾಯಿ, ತಾತ್ಯಾಟೋಪಿ, ನಾನಾ ಸಾಹೇಬರಂತಹ ಸ್ವಾಭಿಮಾನಿ, ಸಾಹಸಿ ರಾಜಮನೆತನಗಳು ಸ್ವಾತಂತ್ರ್ಯಕ್ಕೆ ಧಕ್ಕೆಯೊದಗಿದಾಗ ವೀರಾವೇಶದಿಂದ ಹೋರಾಡಿ ಪರತಂತ್ರಕ್ಕೆ ಬಲಿಯಾಗದೇ ವೀರಮರಣವನ್ನೇ ಕಂಡರು. ಭಗತ್‌ಸಿಂಗ್, ಸುಖದೇವ್, ರಾಜಗುರು, ಚಂದ್ರಶೇಖರ ಆಜಾದ್ ಅವರಂತಹ ಬಿಸಿರಕ್ತದ ಯುವಕರು, ಲಾಲಾ ಲಜಪತ್‌ರಾಯ, ಬಾಲಗಂಗಾಧರ ತಿಲಕ್, ಬಿಪಿನ್‌ಚಂದ್ರಪಾಲ್ (ಲಾಲ-ಬಾಲ-ಪಾಲ) ಮುಂತಾದ ಉಗ್ರ ಹೋರಾಟಗಾರರ ಸ್ಫೂರ್ತಿ ಸ್ವಾತಂತ್ರ್ಯ ಚಿಲುಮೆಯಾಗಿ ಚಿಮ್ಮಿತು.

1917ರಲ್ಲಿ ಸ್ವಾತಂತ್ರ್ಯ ಹೋರಾಟಕ್ಕೆ ಹೊಸಸ್ವರೂಪ ಬಂತು. ಗಾಂಧಿ ಎಂಬ ಮಹಾಮಂತ್ರದಂಡಕ್ಕೆ ದೇಶದ ಸಮಸ್ತ ಜನ ಸಮುದಾಯವೇ ಮುನ್ನುಗ್ಗಿ ಬಂತು. ಹೆಣ್ಣು, ಗಂಡು, ಯುವಕರು, ಮುದುಕರು, ಬಡವರು, ಸಿರಿವಂತರು ಎಂಬ ಭೇದಭಾವವಿಲ್ಲದೆ ತಮ್ಮ ಗುರಿ, ಗುಡಾರಗಳು, ಶಾಲೆ-ಕಾಲೇಜುಗಳು, ಗುಡಿಸಲು, ಮನೆಗಳು, ಮಹಲ್‌ಗಳಿಂದ ಹೊರಬಂದರು. ಅದುವರೆಗೆ ಕತ್ತಿ, ಖಡ್ಗ, ಮದ್ದು, ಗುಂಡುಗಳ ಸಹಾಯದಿಂದ ಗೆದ್ದಿದ್ದ ಬ್ರಿಟಿಷ್ ಸಾಮ್ರಾಜ್ಯದ ಜಂಘಾಬಲವೇ ಉಡಗಿ ಹೋಯಿತು.

ಈ ಮಹಾನ್ ವಿಜಯಗಾಥೆಯಲ್ಲಿ ಕನ್ನಡಿಗರ ಕೊಡುಗೆ ಅನುಪಮ. ಮೈಸೂರು ಹುಲಿ ಟಿಪ್ಪುಸುಲ್ತಾನ್, ರಾಣಿ ಚೆನ್ನಮ್ಮ, ಸಂಗೊಳ್ಳಿರಾಯಣ್ಣ, ಅಬ್ಬಕ್ಕದೇವಿ, ವೀರಸಿಂಧೂರ ಲಕ್ಷ್ಮಣರ ವೀರಗಾಥೆಗಳು ಮೈನವಿರೇಳಿಸುತ್ತವೆ.

ಆಗಸ್ಟ್ 1942ರಲ್ಲಿ 'ಕ್ವಿಟ್ ಇಂಡಿಯಾ ಚಳುವಳಿ'ಯಲ್ಲಿ ಕರ್ನಾಟಕದ ಸ್ವಾತಂತ್ರ್ಯಯೋಧರ ಪಾತ್ರ ಬಹಳ ಹಿರಿದು. ಮೈಲಾರ ಮಹದೇವಪ್ಪ ಮೆಣಸಿನಕಾಳು ತಿಮ್ಮಣಗೌಡ ಕೊಟ್ರೆ ನಂಜಪ್ಪ ಈ ಚಳುವಳಿಯಲ್ಲಿ ವೀರಮರಣವನ್ನಪ್ಪಿದ ಪ್ರಮುಖರು.

ಗಂಗಾಧರರಾವ್ ದೇಶಪಾಂಡೆ, ತಗಡೂರು ರಾಮಚಂದ್ರರಾವ್, ಕೌಜಲಗಿ ಹನುಮಂತರಾವ್, ಕೌಜಲಗಿ ಶ್ರೀನಿವಾಸ್‌ರಾವ್, ಎಸ್. ಚೆನ್ನಯ್ಯ ಗೋವಿಂದರಾವ್ ಯಾಲಗಿ, ಹನುಮಂತರಾವ್ ದೇಶಪಾಂಡೆ, ಕಾರ್ನಾಡ್ ಸದಾಶಿವರಾವ್, ರಂಗನಾಥ ದಿವಾಕರ್, ಡಾ|| ನಾ.ಸು. ಹರ್ಡೀಕರ್, ಅಂಬಲಿ ಚೆನ್ನಬಸಪ್ಪ, ಕೆ.ಸಿ. ರೆಡ್ಡಿ, ಟೇಕೂರು ಸುಬ್ರಹ್ಮಣ್ಯಂ, ಕೆ.ಟಿ. ಬಾಷ್ಯಂ, ಹೆಚ್.ಸಿ. ದಾಸಪ್ಪ, ವೀರಣ್ಣಗೌಡ, ಶ್ರೀರಂಗ ಕಾಮತ್, ಬಿಂಧುಮಾದವ ಬುರ್ಲೆ, ನರಸಿಂಹ ದಾಬಡೆ, ಸಂಗೂರು ಕರಿಯಪ್ಪ, ವೆಂಕಟೇಶ್ ಮಾಗಡಿ, ಕೆ.ಬಿ. ದುಂದುರ್, ಶಂಕರ್ ಕುರ್ತಕೋಟಿ ಮುಂತಾದ ಮಹನೀಯರು ತೋರಿದ ನಿಸ್ವಾರ್ಥ ಮನೋಭಾವ ಮತ್ತು ತ್ಯಾಗಜೀವನ ಸದಾಸ್ಮರಣೀಯ. ರಾಜ್ಯದ ಮಾಜಿ ಮುಖ್ಯಮಂತ್ರಿ ಹಾಗೂ ಹಿರಿಯ ಮುತ್ಸದ್ಧಿ ಸಿದ್ಧವ್ವನಹಳ್ಳಿ ನಿಜಲಿಂಗಪ್ಪ, ಕೆಂಗಲ್ ಹನುಮಂತಯ್ಯ, ಕಡಿದಾಳ ಮಂಜಪ್ಪ, ಶಿಕ್ಷಣತಜ್ಞ ಮತ್ತು ಬೆಂಗಳೂರು ವಿಶ್ವವಿದ್ಯಾನಿಲಯದ ಮಾಜಿ ಉಪಕುಲಪತಿ ಡಾ|| ಹೆಚ್. ನರಸಿಂಹಯ್ಯನವರಂತಹ ಹಿರಿಯ ಸ್ವಾತಂತ್ರ್ಯ ಹೋರಾಟಗಾರರು ತಮ್ಮ ನಡುವೆ ಇದ್ದು ನಿರಂತರ ಸ್ಫೂರ್ತಿಯ ನೆಲೆಯಾಗಿರುವುದು ಕನ್ನಡಿಗರೆಲ್ಲರಿಗೂ ಹೆಮ್ಮೆಯ ಸಂಗತಿ

50ನೇ ಸ್ವಾತಂತ್ರ್ಯೋತ್ಸವದ ಕೊಡುಗೆ : ಸ್ವಾತಂತ್ರ್ಯ ಹೋರಾಟಗಾರರ ಮಾಸಾಶನ ರೂ. 750ಕ್ಕೆ ಹೆಚ್ಚಳ, 10,000 ಶಾಲಾ ಕೊಠಡಿಗಳ ನಿರ್ಮಾಣ, 18,500 ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿ, ಶಾಲೆಗಳೇ ಇಲ್ಲದ ಪ್ರದೇಶಗಳಲ್ಲಿ 2,000 ನೂತನ ಕಿರಿಯ ಪ್ರಾಥಮಿಕ ಶಾಲೆಗಳ ಆರಂಭ. 2,000 ಹಿರಿಯ ಪ್ರಾಥಮಿಕ ಶಾಲೆಗಳ ಪ್ರಾರಂಭಕ್ಕೆ ಕ್ರಮ. ಗ್ರಾಮೀಣ ಪ್ರದೇಶಗಳಲ್ಲಿ ಜನರಿಗೆ ತಮ್ಮ ಅಗತ್ಯಗಳನ್ನು ಸುಲಭವಾಗಿ ಪಡೆದುಕೊಳ್ಳುವಂತಾಗಲು ಸುಧಾರಿತ ರಸ್ತೆ ಸಂಪರ್ಕ.

**ಸುವರ್ಣಭಾರತ - ಸಮೃದ್ಧ ಕರ್ನಾಟಕ**

ಕರ್ನಾಟಕ ವಾರ್ತೆ

**ACHALA** - Edited by N. Gayathri, Published by Dr. G. Ramakrishna on behalf of Jagruthi Mahila Adhyayana Kendra, 26, 1st Main Road, Vyalikaval, Bangalore-03. Typeset & Printing by **AKSHARA PRINTERS**, B'lore-4. Ph.: 624082